∴ ೧೨ ಪೆನ್ಸಿಲುಗಳ ಮಾ.ಬೆ. ೩೦ ಆ. ಅವುಗಳ ಕೊ. ಬೆ. ೨೪ ಆಣೆ.

∴ ೩೦ ಆ. ಮಾ. ಬೆ. − ೨೪ ಆ. ಕೊ. ಬೆ. = ೬ ಆ. ಲಾಭ ಉತ್ತರ.

**ಮಾ. ಲೆಕ್ಕ:**— (೨) ೧೨$\frac{೧}{೨}$ ರೂ. ಗಳಿಗೆ ಒಂದು ಮಣ ಒಳ್ಳೆಣ್ಣೆಯನ್ನು ಕೊಂಡು ಧಾರಣೆ ಇಳಿಯಲು ೨$\frac{೧}{೨}$ ರೂ. ಹಾನಿ ಮಾಡಿಕೊಂಡು ಅದನ್ನೆಲ್ಲ ಮಾರಿದನು. ಆದರೆ ೧ ಸೇರು ಒಳ್ಳೆಣ್ಣೆಯನ್ನು ಹೇಗೆ ಮಾರಿರಬೇಕು ?

**ರೀತಿ:**—ಕೊ. ಬೆ. ಯು ೧೨$\frac{೧}{೨}$ ರೂ. ಇದ್ದು ೨$\frac{೧}{೨}$ ರೂ. ಹಾನಿಯಾಗಿದೆ.

∴ ಮಾ. ಬೆ. = ಕೊ. ಬೆ. − ಹಾನಿ.

∴ ಮಾ. ಬೆ. = ೧೨$\frac{೧}{೨}$ ರೂ. − ೨$\frac{೧}{೨}$ ರೂ. = ೧೦ ರೂ. ೧ ಮ. = ೪೦ ಸೇರು.

| | |
|---|---|
| ∴ ೪೦ ಸೇರಿಗೆ ೧೦ ರೂ. | ೧೦ ರೂ. × $\frac{೧}{೪೦}$ = $\frac{೧}{೪}$ ರೂ. = ೪ ಆ. |
| ∴ ೧ ಸೇರಿಗೆ $\frac{೧}{೪}$ ರೂ. = ೪ ಆ. | ∴ ೪ ಆ. ಗೆ ಸೇ. ಮಾ. ಬೆ. ಉತ್ತರ. |

**ಮಾ. ಲೆಕ್ಕ:**— (೩) ಒಬ್ಬ ಕುರುಬನು ೨೪ ರೂ. ಗಳಿಗೊಂದರಂತೆ ೩೦ ಕುರಿಗಳನ್ನು ಮಾರಲಾಗಿ ಅವನಿಗೆ ೬೦ ರೂ. ಲಾಭವಾಯಿತು. ಆದರೆ ಆ ಕುರಿಗಳನ್ನು ಹೇಗೆ ಒಂದರಂತೆ ಕೊಂಡಿರಬೇಕು ?

**ರೀತಿ:**— ಒಟ್ಟು ಮಾರಾಟದ ಬೆಲೆಯನ್ನು ತೆಗೆದು ಅದರಲ್ಲಿ ಲಾಭವನ್ನು ಕಳೆಯಲು ಕೊಂಡ ಬೆಲೆ ದೊರೆಯುವದು.

| | |
|---|---|
| ∴ ೧ ಕುರಿಗೆ ೨೪ ರೂ. | ೩೦ ಕುರಿ × ೨೪ ರೂ. = ೭೨೦ ರೂ. |
| ∴ ೩೦ ಕುರಿಗೆ ೭೨೦ ರೂ. ಗಳು. | |

∴ ಒಟ್ಟು ಮಾ. ಬೆ. = ೭೨೦ ರೂ. ಗಳು ಮತ್ತು ಲಾಭ = ೬೦ ರೂ.

∴ ಕೊಂ. ಬೆ. = ೭೨೦ ರೂ. − ೬೦ ರೂ. = ೬೬೦ ರೂ.

| | |
|---|---|
| ∴ ೩೦ ಕುರಿಗಳಿಗೆ ೬೬೦ ರೂ. | $\frac{೬೬೦}{೧}$ ರೂ. × $\frac{೧}{೩೦}$ = ೨೨ ರೂ. |
| ∴ ೧ ಕುರಿಗೆ ೨೨ ರೂ. ಗಳು. | |

∴ ೧ ಕುರಿಯ ಕೊಂ. ಬೆ. ೨೨ ರೂ. ಉತ್ತರ.

## ಉದಾಹರಣೆಗಳು (೫೪)

(ಬಾಯಿಲೆಕ್ಕ ೧ ರಿಂದ ೫)

(೧) ೧ ಪುಸ್ತಕವನ್ನು ೧$\frac{೧}{೨}$ ರೂ. ಗಳಿಗೆ ಕೊಂಡು ೧ ರೂ. ೧೨ ಆ. ಗಳಿಗೆ ಮಾರಿದರೆ ಆಗುವ ಲಾಭವೆಷ್ಟು ?

(೨) ೭ ರೂಪಾಯಿ ೮ ಆಣೆಗಳಿಗೆ ೧ ಗಡ್ಡಿ ಕಾಗದವನ್ನು ಕೊಂಡು ೯ ರೂಪಾಯಿಗಳಿಗೆ ಮಾರಿದರೆ ಲಾಭವೆಷ್ಟು ?

(೩) ೧ ಧಡೆ ಬದನೇಕಾಯಿಯನ್ನು ೧೨ ಆ. ಗಳಿಗೆ ಕೊಂಡು ೧೦ ಆಣೆಗೆ ಮಾರಿದರೆ ಹಾನಿ ಎಷ್ಟು ?

(೪) ೬೦ ರೂ. ಗಳಿಗೊಂದರಂತೆ ೧೦ ಆಕಳುಗಳನ್ನು ಕೊಂಡು ೭೦ ರೂ. ಗಳಿಗೊಂದರಂತೆ ಎಲ್ಲವನ್ನೂ ಮಾರಿದರೆ ಆಗುವ ಲಾಭವೆಷ್ಟು ?

(೫) ೧೬ ರೂಪಾಯಿಗಳಿಗೊಂದರಂತೆ ೨೦ ಚೀಲ ಜೋಳವನ್ನು ಕೊಂಡು ೧೫ ರೂ. ಗಳಿಗೊಂದರಂತೆ ಮಾರಲು ಆಗುವ ಹಾನಿ ಎಷ್ಟು ?

(೬) ೧ ರೂ. ೮ ಆ. ಗೊಂದು ಡಝನಿನಂತೆ ೫ ಡ. ಹಣ್ಣು ಕೊಂಡು ೧ ಆ. ೩ ದು. ಗೊಂದರಂತೆ ಮಾರಲು ಆದ ಹಾನಿ ಎಷ್ಟು ?

(೭) ೩೪ ಬಾಟ್ಲಿ ಎಣ್ಣೆಯುಳ್ಳ ಒಂದು ಡಬ್ಬಿಯನ್ನು ೫ ರೂ. ೬ ಆಣೆಗೆ ಕೊಂಡು ೪ ಆಣೆಗೆ ಬಾಟ್ಲಿಯಂತೆ ಮಾರಲು ಎಷ್ಟು ಲಾಭವಾಗುವದು ?

(೮) ೧ ರೂ.ಗೆ ೨ ೧/೩ ಸೇರಿನಂತೆ ೪೫ ರೂ.ಗಳ ಗೋದಿಯನ್ನು ಕೊಂಡು ೧ ರೂ. ಗೆ ೨ ೧/೪ ಸೇರಿನಂತೆ ಮಾರಿದರೆ ಒಟ್ಟು ಎಷ್ಟು ಲಾಭವಾಗುವದು ?

(೯) ೨೧ ರೂಪಾಯಿಗೆ ೧ ಮಣ ಉತ್ತತ್ತಿಯನ್ನು ಕೊಂಡು ಹೇಗೆ ೧ ಸೇ. ಮಾರಿದರೆ ಒಟ್ಟಿಗೆ ೩ ರೂ. ಲಾಭವಾಗುವದು. (೧ ಮಣ = ೪೮ ಸೇ.)

(೧೦) ಒಂದು ಮೋಸಂಬಿಗೆ ೨ ಆಣೆಗಳಂತೆ ೫ ಡಝನ ಮೋಸಂಬಿ ಗಳನ್ನು ಮಾರಲಾಗಿ, ೧ ರೂ. ೧೪ ಆಣೆ ಹಾನಿಯಾಯಿತು. ಆದರೆ ಒಂದು ಮೋಸಂಬಿಯನ್ನು ಹೇಗೆ ಕೊಂಡಿರಬೇಕು ?

## ಪ್ರಾಪ್ತಿಯ ಕರ

ವಾರ್ಷಿಕ ಉತ್ಪನ್ನವು ೩೬೦೦ ರೂ. ಗಿಂತ ಹೆಚ್ಚಾಗಿದ್ದ ವ್ಯಾಪಾರಸ್ಥ, ಉದ್ಯೋಗಸ್ಥ, ಹೆಚ್ಚು ಪಗಾರದ ನೌಕರ ಮೊದಲಾದವರು ಸರಕಾರಕ್ಕೆ ೧ ರೂ. ಗೆ ಇಂತಿಷ್ಟು ಎಂದು ಕೆಲವು ಹಣ ಕೊಡಬೇಕಾಗುತ್ತದೆ. ಇದಕ್ಕೆ ಪ್ರಾಪ್ತಿಯ ಕರವೆಂದು ಹೆಸರು.

ದೇಶದ ಆರ್ಥಿಕ ಸ್ಥಿತಿಗತಿಗಳಿಗನುಸರಿಸಿ ಸರಕಾರದವರು ಒಮ್ಮೊಮ್ಮೆ ಹೊಸ ಕರಗಳನ್ನು ಎತ್ತುವದುಂಟು. ನಮ್ಮ ಸರಕಾರದವರು ೧ ರೂ. ವ್ಯಾಪಾರದಲ್ಲಿ ೬ ಪೈಗಳಂತೆ ವ್ಯಾಪಾರಿ ಕರವೆಂದು ತಕ್ಕೊಳ್ಳುವರು. ದೊಡ್ಡ ಪಟ್ಟಣಗಳಲ್ಲಿ ಮನೆಪಟ್ಟಿ, ನಳಪಟ್ಟಿಗಳೆಂದು ವಸೂಲಮಾಡುವದೂ, ಆದರಂತೆ ಹೊರಗಿನಿಂದ ಬರತಕ್ಕ ಹೊಸ ಮಾಲುಗಳಿಗೆ ಜಕಾತಿಯನ್ನು ತಕ್ಕೊಳ್ಳುವದೂ ಒಂದು ಪ್ರಕಾರದ ಕರವೇ. ಇನ್ನೂ ಇಂಥ ಅನೇಕ ಕರಗಳಿರುತ್ತವೆ.

**ಮಾ. ಲೆಕ್ಕ:—** ಒಬ್ಬ ನೌಕರನ ಪಗಾರವು ತಿಂಗಳಿಗೆ ೩೫೦ ರೂ. ಇದೆ; ೧ ರೂ. ಗೆ ೩ ಪೈಗಳಂತೆ ಅವನು ವಾರ್ಷಿಕ ಉತ್ಪನ್ನದ ಮೇಲಿನ ಕರವನ್ನು ಕೊಡಲು ಎಷ್ಟು ಉಳಿಯುವದು ?

**ರೀತಿ:—** ಇಲ್ಲಿ ವಾರ್ಷಿಕ ಉತ್ಪನ್ನವೆಂದರೆ, ವರ್ಷದ ಇಡೀ ಪಗಾರವು. ಆದರ ಮೇಲೆ ಕರವೆಷ್ಟಾಗುವದೆಂಬದನ್ನು ತೆಗೆಯುವಾ. (೧ ವ. = ೧೨ ತಿಂ.)

| | |
|---|---|
| ∴ ೧ ತಿಂ. ಗೆ ೩೫೦ ರೂ. ಪಗಾರ | ೧೨ ತಿಂಗಳು ೧ ತಿಂಗಳ ೧೨ ಪಟ್ಟು. |
| ∴ ೧೨ ತಿಂ. ಗೆ ೪೨೦೦ ರೂ. | ∴ ಪಗಾರ= ೩೫೦×೧೨= ೪೨೦೦ ರೂ. |

∴ ೧ ವರ್ಷದ ಪಗಾರ ೪೨೦೦ ರೂ.; ಇದರ ಮೇಲೆ ೧ ರೂಪಾಯಿಗೆ ೩ ಪೈಗಳಂತೆ ಕರವನ್ನು ತೆಗೆಯುವಾ. ೩ ಪೈ = ೩/೧೯೨ = ೧/೬೪ ರೂ.

| | |
|---|---|
| ∴ ೧ ರೂ.ಗೆ ೧/೬೪ ರೂ. ಕರ | ಕರ = ೧/೬೪ × ೪೨೦೦ ರೂ. = ೫೨೫/೮ |
| ∴ ೪೨೦೦ ರೂ.ಗೆ ೬೫ ೫/೮ ರೂ. ಕರ | = ೬೫ ೫/೮ ರೂ. |

∴ ಕರ ಕೊಡಲಾಗಿ ಉಳಿಯುವ ಉತ್ಪನ್ನ = ೪೨೦೦ ರೂ. – ೬೫ ೫/೮ ರೂ. = ೪೧೩೪ ೩/೮ ರೂ. ∴ ಉಳಿದ ಉತ್ಪನ್ನ ೪೧೩೪ ೩/೮ ರೂ. ಉತ್ತರ.

## ಉದಾಹರಣೆಗಳು (೫೫)

(೧) ಒಬ್ಬ ವ್ಯಾಪಾರಿಗೆ ಒಂದು ವರ್ಷ ೪೮೦೦ ರೂ. ಲಾಭವಾಯಿತು. ಆದರೆ ೧ ರೂ. ಗೆ ೬ ಪೈಗಳಂತೆ ಎಷ್ಟು ಕರವನ್ನು ಕೊಡಬೇಕು ? ಮತ್ತು ಉಳಿಯುವ ಉತ್ಪನ್ನವೆಷ್ಟು ?

(೨) ಒಬ್ಬ ಸರಕಾರಿ ನೌಕರನ ಉತ್ಪನ್ನದ ಕರವು ೧ ರೂ. ಗೆ ೪ ಪೈಗಳಂತೆ ೮೨ ರೂ. ೮ ಆ. ಆದರೆ ಅವನ ತಿಂಗಳ ಪಗಾರವೆಷ್ಟು ?

(೩) ಒಂದು ಜಾತ್ರೆಯಲ್ಲಿ ಕೂಡಿದ ಜನರ ತಲೆಪಟ್ಟಿಯು ಪ್ರತಿಯೊಬ್ಬನಿಗೆ ೨ ಆಣೆಗಳಂತೆ ೫೦೦ ರೂ. ಆದರೆ ಆ ಜಾತ್ರೆಗೆ ಕೂಡಿದ ಜನರೆಷ್ಟು ?

(೪) ನಾವು ಒಂದು ಅಂಗಡಿಯಲ್ಲಿ ವ್ಯಾಪಾರ ಮಾಡಿದ್ದಕ್ಕಾಗಿ ೧ ರೂ. ಗೆ ೬ ಪೈಗಳಂತೆ ೬ ರೂ. ೪ ಆ. ವ್ಯಾಪಾರಿ ಕರವನ್ನು ಕೊಟ್ಟರೆ, ಆ ಅಂಗಡಿಯಲ್ಲಿ ಎಷ್ಟು ರೂ. ಗಳ ವ್ಯಾಪಾರ ಮಾಡಿರಬೇಕು ?

(೫) ಒಬ್ಬ ಡಾಕ್ಟರನು ೧ ರೂ. ಗೆ ೯ ಪೈಗಳಂತೆ ಉತ್ಪನ್ನದ ಮೇಲಿನ ಕರವನ್ನು ಕೊಡುತ್ತಾನೆ; ಅವನ ವಾರ್ಷಿಕ ನಿವ್ವಳ ಉತ್ಪನ್ನ ೪೫೭೫ ರೂ. ಗಳಿದ್ದರೆ ಅವನ ತಿಂಗಳ ಪಗಾರವೆಷ್ಟು ?

## ದಲಾಲಿ ಮತ್ತು ಕಮಿಶನ್

ವ್ಯವಹಾರವು ಸುಸೂತ್ರವಾಗಿ ಸಾಗಲಿಕ್ಕೂ ಮತ್ತು ಬೆಳೆಯಲಿಕ್ಕೂ ಒಬ್ಬ ಮಧ್ಯಸ್ಥಗಾರನ ಅವಶ್ಯಕತೆಯುಂಟು. ಯಂತ್ರ, ಕಾಗದ, ಔಷಧ ಮುಂತಾದವುಗಳ ವ್ಯವಹಾರವು ಅಂಥ ಒಬ್ಬ (ಮಧ್ಯಸ್ಥ) **ಎಜಂಟನ** ಮುಖಾಂತರವಾಗಿಯೇ ನಡೆಯುತ್ತದೆ. ಇಂಥವರಿಗೆ "**ಕಮಿಶನ್**" ಎಂದು ಕೆಲವು ಹಣ ದೊರೆಯುತ್ತದೆ. ಆದರಂತೆ ಹತ್ತಿ, ಧಾನ್ಯ, ಹೊಲ, ಮನೆ ಮುಂತಾದವುಗಳ ವ್ಯವಹಾರವೂ **ದಲಾಲನ** ಮುಖಾಂತರವಾಗಿಯೇ ನಡೆಯುತ್ತದೆ. ಅವನಿಗೆ "**ದಲಾಲಿ**" ಎಂದು ಕೆಲವು ಹಣ ದೊರೆಯುತ್ತದೆ. (ಮೂಲ ಬೆಲೆಯ ಮೇಲೆಯೇ ಕಮಿಶನ್ ಕೊಡುವರು.

**ಮಾ. ಲೆಕ್ಕ:—** ಶಿವಪ್ಪನು ದಲಾಲನ ಮುಖಾಂತರ ತನ್ನ ಮನೆಯನ್ನು ಮಾರಿ ೧೦೦ಕ್ಕೆ ೪ ರಂತೆ ದಲಾಲಿಯನ್ನು ಕೊಟ್ಟರೆ ೨೮೮೦ ರೂ. ಉಳಿದವು. ಆದರೆ ಅದು ಎಷ್ಟಕ್ಕೆ ಮಾರಿರಬೇಕು ? ಮತ್ತು ಕೊಟ್ಟ ದಲಾಲಿ ಎಷ್ಟು ?

**ರೀತಿ:—**೧೦೦ ರೂ.ಗೆ ಮಾರಿದ್ದರೆ ೪ ರೂ. ದಲಾಲಿಹೋಗಿ(೧೦೦ ರೂ.– ೪ ರೂ. =) ೯೬ ರೂ. ಉಳಿಯುತ್ತಿತ್ತು. ಆದರೆ ಈಗ ೨೮೮೦ ರೂ. ಉಳಿದಿವೆ.

**ಸಮ:—** ೯೬ ರೂ. ಉ. : ೨೮೮೦ ರೂ. ಉ. : : ೧೦೦ ರೂ. ಮಾ.ಬೆ

∴ ಇ. ಪ. = $\frac{೨೮೮೦}{೯೬}$ × ೧೦೦ = ೩೦೦೦ ರೂ. ಗಳು.

∴ ೩೦೦೦ ರೂ. ಮಾ. ಬೆ. – ೨೮೮೦ ರೂ. ಉಳಿದದ್ದು=೧೨೦ ರೂ. ದಲಾಲಿ.

∴ ೩೦೦೦ ರೂ. ಮಾ. ಬೆಲೆ; ೧೨೦ ರೂ. ದಲಾಲಿ ಉತ್ತರ.

### ಉದಾಹರಣೆಗಳು (೫೬)

(೧) ೧ ರೂ. ಗೆ ೧ ಆಣೆಯಂತೆ ಕಮಿಶನ್ ಕೊಡುವ ಕರಾರದಿಂದ ೪೫ ರೂ. ಗಳ ಪುಸ್ತಕಗಳನ್ನು ಕೊಂಡರೆ, ಎಷ್ಟು ಕಮಿಶನ್ ದೊರೆಯುತ್ತದೆ ?

(೨) ೧೦೦ ಕ್ಕೆ ೩ ರಂತೆ ದಲಾಲಿಯನ್ನು ಕೊಟ್ಟು ನಾವು ಒಂದು ಹೊಲವನ್ನು ಮಾರಿದೆವು. ನಮಗೆ ೪೩೬೫ ರೂ. ಗಳು ದೊರೆತರೆ, ಮೂಲ ಅದನ್ನು ಎಷ್ಟಕ್ಕೆ ಮಾರಿರಬೇಕು ?

(೩) ೧೨ ಆಣೆ ಬೆಲೆಯ ಎಷ್ಟು ಪುಸ್ತಕಗಳನ್ನು ಕೊಂಡರೆ ೧೦೦ಕ್ಕೆ ೨೦ ರಂತೆ ಕಮಿಶನ್ ಮುರಕೊಂಡು ೧೨೦ ರೂ. ಕೊಡಬೇಕಾದೀತು ?

(೪) ೧೦೦ ಕ್ಕೆ ೧೫ ರಂತೆ ಕಮಿಶನ್ ಮುರಕೊಂಡು ೪೦೦ ಪುಸ್ತಕಗಳನ್ನು ೪೨೫ ರೂ. ಗಳಿಗೆ ಕೊಂಡರೆ ಒಂದರ ಮೂಲ ಬೆಲೆ ಏನು ?

# ಜಮಾಖರ್ಚು

ಬಾಲಕರೇ, ನೀವು ನಿಮಗೆ ಬೇಕಾದ ಪುಸ್ತಕ ಪೆನ್ಸಿಲು ಮೊದಲಾದವು ಗಳನ್ನು ಮಾರಲಿಕ್ಕೆ ತಕ್ಕೊಂಡು ಅವಕ್ಕಾಗಿ ಹಣ ಕೊಡುವಿರಿ. ಅದೇ ಮೇರೆಗೆ ನಿಮಗೆ ಬೇಡಾದ ಗುಂಡು, ಬಗರಿ ಮುಂತಾದವುಗಳನ್ನು ಮಾರಿ ಹಣ ತಕ್ಕೊಳ್ಳುವಿರಿ. ಇದರಂತೆ ಕೆಲವು ಜನರಿಗೆ ಪಗಾರ, ಕೂಲಿ-ಕುಂಬಳಿ ಗಳಿಂದ ಹಣ ಬರುವದು. ಹಲವರಿಗೆ ಹೊಲ-ಮನೆಗಳಿಂದ, ಬೇರೆ ಕೆಲವರಿಗೆ ಬೇರೆ ಬೇರೆ ಉದ್ಯೋಗಗಳಿಂದ ಉತ್ಪನ್ನ ಬರುವದು. ಆ ಬಂದ ಹಣದಿಂದ ಕಾಳುಕಡಿ ಮುಂತಾದ ಆಹಾರದ ಸಾಮಾನು, ಅರಿವೆ-ಅಂಚಡಿ ಮುಂತಾದ ಮನೆತನಕ್ಕೆ ಬೇಕಾದ ವಸ್ತುಗಳನ್ನು ಕೊಂಡುಕೊಳ್ಳುವರು. ದಾನ-ಧರ್ಮ, ಮನರಂಜನೆ ಮುಂತಾದ ಕಾರ್ಯಗಳಿಗೆ ಖರ್ಚು ಮಾಡುವರು. ಹೀಗೆ ತರುಬರುವದೂ ಕೊಡಕೊಳ್ಳುವದೂ ಒಂದೇಸವನೆ ನಡೆದಿರುತ್ತದೆ. ಇವು ಗಳಿಗೆ ವ್ಯವಹಾರ ಅನ್ನುವರು.

(೧) **ವ್ಯವಹಾರ:—** ಹಣ ಕೊಟ್ಟು ಸಾಮಾನು ಕೊಳ್ಳುವದಕ್ಕೂ ಹಣ ತಕ್ಕೊಂಡು ಸಾಮಾನು ಮಾರುವದಕ್ಕೂ ಸಾಮಾನ್ಯವಾಗಿ ವ್ಯವಹಾರ ಅನ್ನುತ್ತಾರೆ.

ಉದಾ:— (೧) ಬಸವನು ೧೦ ಆಣೆ ಕೊಟ್ಟು ಒಂದು ಪುಸ್ತಕ ಕೊಂಡನು.
(೨) ಸಾವಕ್ಕನ್ನು ೧೫ ಆಣೆಗೆ ಒಂದು ಸೇರು ಬೆಣ್ಣೀ ಮಾರಿದಳು.
(೩) ಕಲ್ಲಪ್ಪನು ೪ ರೂ. ಗಳಿಗೆ ೧೦ ಸೇರು ಜೋಳ ಕೊಟ್ಟನು.
(೪) ನಾವು ೮ ಆಣೆ ಕಾಯಿಪಲ್ಲೆ ತಂದೆವು.
(೫) ರಂಗನು ಈರನಿಗೆ ೧೦ ರೂ. ಕೈಗಡ ಕೊಟ್ಟನು.

ಮೇಲೆ ಬರೆದುವೆಲ್ಲವೂ ವ್ಯವಹಾರಗಳು. ಇದರಂತೆಯೇ ನೀವು ಕೆಲವು ವ್ಯವಹಾರಗಳನ್ನು ಹೇಳಿರಿ.

(೨) **ಜಮೆ ಹಾಗು ಖರ್ಚಿನ ವ್ಯವಹಾರಗಳು:—**

(೧) ಈರನ ತಂದೆಯು ಅವನಿಗೆ ೨ ರೂಪಾಯಿಗಳನ್ನು ಕೊಟ್ಟನು.

(೩) ಅವನು ತನ್ನ ಹಳೆಯ ಪೆನ್ನು ೧ ರೂಪಾಯಿಗೆ ಮಾರಿದನು.

ಈರನ ಎರಡೂ ವ್ಯವಹಾರಗಳಲ್ಲಿ ಅವನಿಗೆ ಹಣ ಬಂದಿದೆ. (ಜಮೆ ಆಯಿತು.)

(೧) ರಾಮನು ೧ ರೂ. ೮ ಆ. ಕೊಟ್ಟು ಪುಸ್ತಕ ಕೊಂಡನು.
(೨) ೮ ಆಣೆ ಖರ್ಚು ಮಾಡಿ ಸಿನೇಮಾ ನೋಡಿದನು.

ರಾಮನ ಎರಡೂ ವ್ಯವಹಾರಗಳಲ್ಲಿ ಅವನ ಹಣ ಹೋಗಿದೆ. (ಖರ್ಚಾಗಿದೆ) ಹೀಗೆ ವ್ಯವಹಾರಗಳಲ್ಲಿ ಕೆಲವುಗಳಿಂದ ಹಣ ಬರುತ್ತದೆ. ಕೆಲವುಗಳಲ್ಲಿ ಹೋಗುತ್ತದೆ.

**ಜಮೆಯ ವ್ಯವಹಾರ:—** ಯಾವ ವ್ಯವಹಾರಗಳಿಂದ ಹಣ ಬರುವುದೋ ಅವುಗಳಿಗೆ **ಜಮೆಯ ವ್ಯವಹಾರ** ಎನ್ನುವರು.

**ಖರ್ಚಿನ ವ್ಯವಹಾರ:—** ಯಾವ ವ್ಯವಹಾರಗಳಲ್ಲಿ ಹತ್ತರ ಇದ್ದ ಹಣ ಹೋಗುವದೋ ಅವುಗಳಿಗೆ **ಖರ್ಚಿನ ವ್ಯವಹಾರ**ವೆನ್ನುವರು.

ಒಟ್ಟಿನಮೇಲೆ ಹಣ ಬಂದರೆ **ಜಮೆ** ಎಂತಲೂ ಹೋದರೆ **ಖರ್ಚು** ಎಂತಲೂ ಅನ್ನುವರು.

## ಅಭ್ಯಸನಗಳು

೧. ಕೆಳಗಿನ ವ್ಯವಹಾರಗಳಲ್ಲಿ ಜಮೆ ಹಾಗು ಖರ್ಚಿನ ವ್ಯವಹಾರಗಳನ್ನು ಬೇರೆ ಬೇರೆ ಮಾಡಿರಿ.

(ಅ) ಬಸವನು ತಂದೆಯಿಂದ ೫ ರೂಪಾಯಿ ಇಸಗೊಂಡನು.
(ಬ) ರಾಮನು ೮ ಆಣೆಗಳ ಫಲಾಹಾರ ಮಾಡಿದನು.
(ಕ) ನೀಲನು ೧೦ ಆಣೆಗಳ ಕಾಗದ ಕೊಂಡನು.
(ಡ) ಗೌಳಿಯು ೧ ರೂ. ತಕ್ಕೊಂಡು ೨ ಸೇರು ಹಾಲು ಕೊಟ್ಟನು.
(ಇ) ಶ್ಯಾಮನು ೨ ರೂಪಾಯಿಗೆ ಹಳೆಯ ಪೆನ್ನು ಮಾರಿದನು.

೨. ಐದು ಜಮೆಯ ವ್ಯವಹಾರಗಳನ್ನು ಹೇಳಿರಿ.

೩. ಐದು ಖರ್ಚಿನ ವ್ಯವಹಾರಗಳನ್ನು ಹೇಳಿರಿ.

## ವ್ಯವಹಾರಗಳ ಲೆಕ್ಕ (ಜಮಾಖರ್ಚು) ವನ್ನು ಬರೆಯುವದು

ಮಕ್ಕಳೇ, ಎಷ್ಟೋ ಸಾರೆ ನೀವು ನಿಮ್ಮ ತಂದೆ, ತಾಯಿ, ಅಣ್ಣ ಮೊದಲಾದವರಿಂದ ಹಣ ಪಡೆಯುವಿರಿ. ಆ ಹಣದಿಂದ ನಿಮಗೆ ಬೇಕಾದ ಸಾಮಾನುಗಳನ್ನು ಕೊಳ್ಳುವಿರಿ. ಮತ್ತು ಎಷ್ಟೋ ಸಾರೆ ನಿಮ್ಮ ಮನೆತನದ

ಸಂತೆ ಪೇಟೆಯ ವ್ಯವಹಾರಗಳನ್ನು ನೀವೇ ಮಾಡುವ ಪ್ರಸಂಗ ಬರುವದು. ಅದರಂತೆ ನಿಮ್ಮ ಶಾಲೆಯಲ್ಲಿ ನಡೆಯುವ ಉತ್ಸವ, ಸಮ್ಮೇಲನ ಮುಂತಾದವುಗಳ ವ್ಯವಹಾರಗಳನ್ನೂ ನೀವು ಮಾಡಬೇಕಾಗುತ್ತದೆ. ಮತ್ತು ಆ ವ್ಯವಹಾರಗಳ ಲೆಕ್ಕವನ್ನು ಹಿರಿಯರಿಗೆ ಒಪ್ಪಿಸಬೇಕಾಗುತ್ತದೆ. ಆದರೆ ಈ ಎಲ್ಲ ವ್ಯವಹಾರಗಳಲ್ಲಿ ನಿಮಗೆ ಹಣವು ಎಷ್ಟೆಷ್ಟು ಬಂತು? ಯಾರಾರಿಂದ ಬಂತು? ಅದು ಯಾವು ಯಾವುದಕ್ಕೆ ಎಷ್ಟು ಎಷ್ಟು ಖರ್ಚಾಯಿತು? ಎಂಬುದನ್ನು ನೆನಪಿನಲ್ಲಿಯೇ ಇಟ್ಟು ಲೆಕ್ಕ ಒಪ್ಪಿಸುವದು ಕಠಿಣ. ಒಮ್ಮೆಲೆ ಲೆಕ್ಕ ಹೊಂದಲಾರದು. ಆದ್ದರಿಂದ ಆದ ವ್ಯವಹಾರಗಳನ್ನೆಲ್ಲ ಸರಿಯಾಗಿ ಬರೆದಿಡಬೇಕಾಗುವದು. ಅದಕ್ಕೆ ಜಮಾಖರ್ಚು ಅನ್ನುವರು.

**ಜಮಾಖರ್ಚು:— ಮಾಡಿದ ವ್ಯವಹಾರಗಳನ್ನು ಪದ್ಧತಿ ಪ್ರಕಾರ ಸರಿಯಾಗಿ ಬರೆದಿಡುವ ಲೆಕ್ಕಕ್ಕೆ ಜಮಾಖರ್ಚು ಅನ್ನುವರು.**

ಜಮಾಖರ್ಚು ಬರೆದಿಡುವದರಿಂದ ಬಂದ ಹಣ ಎಷ್ಟು, ಖರ್ಚಾದ ಹಣ ಎಷ್ಟು, ಕೊಡತಕ್ಕದ್ದು ಎಷ್ಟು, ಬರತಕ್ಕದ್ದು ಎಷ್ಟು, ಯಾವದಕ್ಕೆ ಹೆಚ್ಚು ಖರ್ಚಾಯಿತು, ಯಾವದಕ್ಕೆ ಕಡಿಮೆ ಖರ್ಚಾಯಿತು ಎಂಬುವದು ಗೊತ್ತಾಗುತ್ತದೆ. ಇದರಿಂದ ಮುಂದೆ ನಮ್ಮ ಉತ್ಪನ್ನಕ್ಕೆ ಸರಿಯಾಗಿ ಯಾವುದಕ್ಕೆ ಎಷ್ಟು ಖರ್ಚು ಮಾಡಬೇಕೆನ್ನುವ ತಿಳುವಳಿಕೆ ಬಂದು ಅದರಂತೆ ನಡೆಯಲು ಅನುಕೂಲವಾಗುತ್ತದೆ.

(೪) **ಡಾಯರಿ** (ವ್ಯವಹಾರಗಳ ಟಿಪ್ಪಣಿ)

ಮಾಡಿದ ವ್ಯವಹಾರಗಳ ಜಮಾಖರ್ಚನ್ನು ಬರೆದಿಡುವ ರೀತಿಯನ್ನು ತಿಳಿದುಕೊಳ್ಳುವಾ:—

ಶಂಕರ ಕುಲಕರ್ಣಿ ಎಂಬ ಒಬ್ಬ ಹುಡುಗನು ತಾ|| ೧೫-೧-೫೨ ನೆಯ ದಿವಸ ಮಾಡಿದ ವ್ಯವಹಾರ ಹಾಗು ಅವನು ಬರೆದಿಟ್ಟ ಲೆಕ್ಕಗಳನ್ನು ಕೆಳಗೆ ತೋರಿಸಿದೆ.

**ವ್ಯವಹಾರ:—** ತಂದೆಯಿಂದ ೮ ರೂ. ಗಳನ್ನು ಇಸಕೊಂಡನು. ಆ ರೂಪಾಯಿಗಳಲ್ಲಿ ೧೨ ಆಣೆಗೆ ಗಣಿತ, ೮ ಆಣೆಗೆ ಭೂಗೋಲ, ೧ ರೂ. ೪ ಆಣೆಗೆ ಕಂಪಾಸ ಪೆಟ್ಟಿಗೆ, ೧ ರೂ. ೮ ಆಣೆಯ ಇತಿಹಾಸ, ೧೦ ಆಣೆಯ ಕಾಗದ, ೨ ರೂ. ೮ ಆಣೆಗೆ ಪೆನ್ನು ಕೊಂಡು ತಕ್ಕೊಂಡನು.

ಶ್ರೀ

**ಶಂಕರನ ಡಾಯರಿ**

ತಾರೀಖು:— ೧೫—೧—೧೯೫೨

| ಜಮಾ | | ಖರ್ಚು | |
|---|---|---|---|
| ರೂ.ಆ.ಪೈ | ವಿವರ : | ರೂ.ಆ.ಪೈ | ವಿವರ : |
| ೮-೦-೦ | ತಂದೆಯಿಂದ ಬಂದದ್ದು. | ೦-೧೨-೦ | ಗಣಿತ ಕೊಂಡದ್ದು |
| | | ೦- ೮-೦ | ಭೂಗೋಲ ,, |
| ೮-೦-೦ | ಅಂತು | ೧- ೪-೦ | ಕಂಪಾಸಪೆಟ್ಟಿಗೆ ,, |
| | | ೧- ೮-೦ | ಇತಿಹಾಸ ,, |
| | | ೦-೧೦-೦ | ಕಾಗದ ,, |
| | | ೨- ೮-೦ | ಪೆನ್ನು ,, |
| | | ೭- ೨-೦ | ಒಟ್ಟು ಖರ್ಚು |
| | | ೦-೧೪-೦ | ಶಿಲ್ಕು |
| | | ೮- ೦-೦ | ಅಂತು |

ಮೇಲೆ ಬರೆದ ಶಂಕರನ ವ್ಯವಹಾರಗಳನ್ನೂ ಅವನ ಡಾಯರಿಯನ್ನೂ ಚೆನ್ನಾಗಿ ನೋಡಿರಿ. ಮೊಟ್ಟಮೊದಲು ಪಾನಿನ ಮಧ್ಯದಲ್ಲಿ ಶ್ರೀ ಅಂತಾ ಬರೆದು ಅದರ ಕೆಳಗೆ ತನ್ನ ಹೆಸರು ತಾರೀಖು ಹಾಕಿರುವನು; ಅವನ ವ್ಯವಹಾರ ಗಳಲ್ಲಿ ತಂದೆಯಿಂದ ೮ ರೂ. ಬಂದದ್ದು, ಅದೊಂದೇ ಜಮೆಯ ವ್ಯವಹಾರ. ಉಳಿದುವೆಲ್ಲ ಖರ್ಚಿನ ವ್ಯವಹಾರಗಳು. ಆದಕ್ಕಾಗಿ ಅವನು ತನ್ನ ಡಾಯರಿ ಯಲ್ಲಿ ಗೆರೆ ಹೊಡೆದು ಎರಡು ಮನೆ (ಖಾನೆ) ಗಳನ್ನು ಮಾಡಿಕೊಂಡಿದ್ದಾನೆ. ಮೊದಲನೆಯ (ಎಡಗಡೆಯ) ಖಾನೆಗೆ ಜಮಾ ಎಂದು ಬರೆದು ಅದರಲ್ಲಿ ಜಮೆಯ ಹಣ ಮತ್ತು ಅದರ ವಿವರ ಬರೆದಿದ್ದಾನೆ. ಅದರಂತೆ ಎರಡನೆಯ (ಬಲಗಡೆಯ) ಖಾನೆಗೆ ಖರ್ಚು ಎಂದು ಬರೆದು ಅದರಲ್ಲಿ ಖರ್ಚಿನ ಆರೂ ವ್ಯವಹಾರಗಳ ರಕಮು ಹಾಗು ವಿವರಗಳನ್ನು ಒಂದರಕೆಳಗೊಂದು ಬರೆದಿ ದ್ದಾನೆ. ಒಟ್ಟು ೭ ರೂ. ೨ ಆಣೆ ಖರ್ಚು ಆಗಿದ್ದು ಅದನ್ನು ಎಲ್ಲ ವ್ಯವಹಾರ

ಗಳ ಕೆಳಗೆ ಎಳೆದ ಜೋಡು ಗೆರೆಗಳ ಕೆಳಗೆ ಬರೆದಿದ್ದಾನೆ. ಮತ್ತು ಜಮೆಯು ರಕಮು ಒಂದೇ ಇರುವದರಿಂದ ಅದರ ಕೆಳಗೆ ಜೋಡು ಗೆರೆ ತೆಗೆದು ೮-೦-೦ ಅಂತು ಎಂದು ಬರೆದಿದ್ದಾನೆ. ಈ ಅಂತು ಜಮೆಯಲ್ಲಿ ಖರ್ಚಾಗಿರುವ ೭ ರೂ. ೨ ಆಣೆಗಳನ್ನು ಕಳೆದು ಉಳಿದ ೧೪ ಆಣೆಗಳನ್ನು ಒಟ್ಟು ಖರ್ಚಿನ ಕೆಳಗೆ ಬರೆದು ಶಿಲ್ಕು ಎಂದಿದ್ದಾನೆ. ಅವನಲ್ಲಿ ಉಳಿದ ಹಣ ಈ ಶಿಲ್ಕಿನಷ್ಟೇ ಇರಲಿಕ್ಕೆಬೇಕು.

ಇದರ ಮೇಲಿಂದ ನೀವೂ ಡಾಯರಿ (ಜಮಾಖರ್ಚು) ಬರೆಯುವಾಗ ಕೆಳಗಿನ ಮಾತುಗಳನ್ನು ಲಕ್ಷದಲ್ಲಿಡಬೇಕು.

(೧) ಕಾಗದದ ತಲೆಯ ಮೇಲೆ ಮಧ್ಯದಲ್ಲಿ ಶ್ರೀ ಅಂತಾ ಬರೆದು ಕೆಳಗೆ ಹೆಸರು ತಾರೀಖು ಹಾಕಬೇಕು.

(೨) ಕಾಗದದಲ್ಲಿ ಸರಿಯಾದ ಎರಡು ಭಾಗ ಮಾಡಿ ಮೊದಲನೆಯ ಭಾಗಕ್ಕೆ ಜಮೆ, ಎರಡನೆಯ ಭಾಗಕ್ಕೆ ಖರ್ಚು ಎಂದು ಹೆಸರು ಕೊಡಬೇಕು.

(೩) ಜಮೆಯ ಮನೆಯಲ್ಲಿ ಜಮೆಯ ವ್ಯವಹಾರಗಳನ್ನೂ ಖರ್ಚಿನ ಮನೆಯಲ್ಲಿ ಖರ್ಚಿನ ವ್ಯವಹಾರಗಳನ್ನೂ ಬರೆಯಬೇಕು. ಅವುಗಳನ್ನು ಬರೆಯುವಾಗ ಮೊದಲು ರಕಮು ಅದರ ಮುಂದೆ ವಿವರ ಈ ಕ್ರಮದಿಂದ ಬರೆಯಬೇಕು.

(೪) ಜಮೆಯ ವ್ಯವಹಾರಗಳ ರಕಮನ್ನು ಒಟ್ಟುಗೂಡಿಸಿ ಜೋಡು ಗೆರೆಯ ಕೆಳಗೆ ಅಂತು ಜಮೆಯೆಂದೂ, ಖರ್ಚಿನ ವ್ಯವಹಾರಗಳ ರಕಮನ್ನು ಒಟ್ಟುಗೂಡಿಸಿ ಜೋಡು ಗೆರೆಯ ಕೆಳಗೆ ಅಂತು ಖರ್ಚು ಎಂದೂ ಬರೆಯಬೇಕು.

(೫) ಅಂತು ಜಮೆಯ ರಕಮಿನಲ್ಲಿ ಒಟ್ಟು ಖರ್ಚಿನ ರಕಮನ್ನು ಕಳೆದರೆ ಉಳಿದದ್ದೇ ಶಿಲ್ಕು ಹಣ, ಅದನ್ನು ಖರ್ಚಿನ ಒಟ್ಟು ರಕಮಿನ ಕೆಳಗೆ ಬರೆದು ಶಿಲ್ಕು ಅಂತಾ ಬರೆಯಬೇಕು.

(೬) ಶಿಲ್ಕು ಮತ್ತು ಖರ್ಚು ಒಟ್ಟುಗೂಡಿಸಿ ಅಂತು ರೂಪಾಯಿ ಎಂದು ಬರೆಯಬೇಕು.

ಸೂಚನೆ:— ಕೈಯಲ್ಲಿ ಉಳಿದಿರುವ ಹಣವು ಡಾಯರಿಯಲ್ಲಿಯ ಶಿಲ್ಕಿನಷ್ಟೇ ಇದ್ದರೆ ಮಾತ್ರ ಜಮಾಖರ್ಚು ಸರಿಯೆಂದು ತಿಳಿಯಬೇಕು.

## ಶಂಕರನ ಎರಡನೆಯ ದಿನದ ಡಾಯರಿ

ಮರುದಿನ ಶಂಕರನು ತನ್ನ ತಾಯಿಯ ಕಡೆಯಿಂದ ೧೦ ರೂ. ಇಸಗೊಂಡನು. ಪೇಟೆಗೆ ಹೋಗಿ ೨ ರೂ. ಟೊಪ್ಪಿಗೆ, ೨ ರೂ. ೪ ಆ. ಅಂಗಿ,

೩ ರೂ. ೧೨ ಆ. ಚೊಣ್ಣ, ೨ ರೂ. ೪ ಆ. ಬೂಟು ತಂದನು. ಮತ್ತು ಅದರ ಡಾಯರಿ ಕೆಳಗಿನಂತೆ ಬರೆದಿಟ್ಟನು.

ಶ್ರೀ

**ಶಂಕರ ಕುಲಕರ್ಣಿ ಡಾಯರಿ**

ತಾರೀಖು ೧೬–೧–೧೯೫೨

| ಜಮಾ ರೂ. | | ಖರ್ಚು ರೂ. | |
|---|---|---|---|
| ೦–೧೪–೦ | ನಿನ್ನಿನ ಶಿಲ್ಕು | ೨– ೦–೦ | ಟೊಪ್ಪಿಗೆ ಕೊಂಡದ್ದು |
| ೧೦– ೦–೦ | ತಾಯಿಯಿಂದ ಬಂದದ್ದು | ೨– ೪–೦ | ಅಂಗಿ ,, |
| | | ೩–೧೨–೦ | ಚೊಣ್ಣ ,, |
| ೧೦–೧೪–೦ | ಅಂತು ಜಮೆ | ೨– ೪–೦ | ಬೂಟು ,, |
| | | ೧೦– ೪–೦ | ಒಟ್ಟು ಖರ್ಚು |
| | | ೦–೧೦–೦ | ಶಿಲ್ಕು |
| | | ೧೦–೧೪–೦ | ಅಂತು ಖರ್ಚು |

ಮೇಲಿನ ಡಾಯರಿಯನ್ನು ನೋಡಿರಿ. ಅದರಲ್ಲಿ ಶಂಕರನು ಗೆರೆ ಹೊಡೆದು ಮನೆಗಳನ್ನು ಮಾಡಿಕೊಂಡಿಲ್ಲ. ಆದರೆ ಕಾಗದ ಮಡಿಚಿ ಎರಡು ಭಾಗ ಮಾತ್ರ ಮಾಡಿಕೊಂಡು ಮೊದಲನೆಯದಕ್ಕೆ ಜಮಾ——ರೂ. ಎಂದೂ, ಎರಡನೆಯದಕ್ಕೆ ಖರ್ಚು——ರೂ. ಎಂದೂ ಬರೆದಿದ್ದಾನೆ. ನಿನ್ನಿನ ದಿವಸ ತನ್ನಲ್ಲಿ ಶಿಲ್ಕು ಉಳಿದ ೧೪ ಆಣೆಗಳನ್ನು ಜಮೆಯ ಮನೆಯಲ್ಲಿ ನಿನ್ನಿನ ಶಿಲ್ಕು ಎಂದು ಬರೆದು ಅದರ ಕೆಳಗೆ ತಾಯಿಯಿಂದ ಬಂದ ೧೦ ರೂ. ಜಮೆ ಬರೆದು ಒಟ್ಟು ೧೦ ರೂ. ೧೪ ಆ. ಗಳನ್ನು ಅಂತು ಜಮೆ ಎಂದು ಬರೆದಿದ್ದಾನೆ. ಮತ್ತು ಖರ್ಚಿನ ಮನೆಯಲ್ಲಿ ತಾನು ಖರ್ಚು ಮಾಡಿದ ಹಣವನ್ನು ವಿವರದೊಂದಿಗೆ ಬೇರೆ ಬೇರೆ ಬರೆದು ಒಟ್ಟು ಖರ್ಚು ಹಾಗು ಶಿಲ್ಕು ಹಣವನ್ನು ತೋರಿಸಿದ್ದಾನೆ.

**ಶಂಕರನ ೩ನೆಯ ದಿನದ ಡಾಯರಿ**

ಶಂಕರನು ವ್ಯವಹಾರ ಮಾಡಲಿಕ್ಕೂ ಡಾಯರಿ ಬರೆಯಲಿಕ್ಕೂ ಜಾಣನಾದದ್ದನ್ನು ಕಂಡು ಅವನ ತಂದೆಯು ಸಂತೆಯನ್ನು ಮಾಡಲಿಕ್ಕೆ ಅವನನ್ನೇ ಕಳಿಸಹತ್ತಿದನು. ತಾರೀಖು : ೧೭—೧—೫೨ನೆಯ ದಿವಸ ಶಂಕರನು ಕೆಳಗಿನಂತೆ ವ್ಯವಹಾರಗಳನ್ನು ಮಾಡಿ ಡಾಯರಿ ಬರೆದಿಟ್ಟನು.

ವ್ಯವಹಾರ:— ಸಂತೆಯ ಖರ್ಚಿಗೆಂದು ತಂದೆಯು ೧೦ ರೂ. ಕೊಟ್ಟನು. ಅಣ್ಣನಕಡೆಯಿಂದ ೫ ರೂ. ಇಸಕೊಂಡನು. ೧ ರೂ. ೨ ಆಣೆಗೆ ೧ ಸೇರಿನಂತೆ ೩ ಸೇರು ಬೇಳೆ ಕೊಂಡನು. ೧೫ ಆಣೆಗೆ ೧ ಸೇರಿನಂತೆ ೪ ಸೇರು ಬೆಣ್ಣೆಯನ್ನು ತೆಗೆದುಕೊಂಡನು. ೮ ಆಣೆಗೆ ೧ ಸೇರಿನಂತೆ ೪ ಸೇರು ಸಕ್ಕರೆ, ೧ ರೂಪಾಯಿ ಫಳಾರ, ೧೦ ಆಣೆ ಕಾಯಿಪಲ್ಲೆ, ೨ ರೂ. ೮ ಆಣೆ ಸಬಕಾರ ತಂದನು. ೪ ಆಣೆ ಆಳಿನ ಕೂಲಿ ಕೊಟ್ಟನು.

## ಶ್ರೀ.

## ಶಂಕರ ಕುಲಕರ್ಣಿ ಡಾಯರಿ

ತಾರೀಖು : ೧೭—೧—೧೯೫೨

| ಜಮಾ ರೂ. | | ಖರ್ಚು ರೂ. | |
|---|---|---|---|
| ೦–೧೦–೦ | ನಿನ್ನಿನ ಶಿಲ್ಕು | ೩– ೬–೦ | ೧ ರೂ. ೨ ಆಣೆಗೆ ೧ ಸೇರಿನಂತೆ ೩ ಸೇರು ಬೇಳೆ ಕೊಂಡದ್ದು. |
| ೧೦– ೦–೦ | ತಂದೆಯಿಂದ ಬಂದದ್ದು | ೩–೧೨–೦ | ೧೫ ಆಣೆಗೆ ಸೇರಿನಂತೆ ೪ ಸೇರು ಬೆಣ್ಣೆ ಕೊಂಡದ್ದು. |
| ೫– ೦–೦ | ಅಣ್ಣನು ಕೊಟ್ಟದ್ದು. | ೨– ೦–೦ | ೮ ಆಣೆಗೆ ೧ ಸೇರಿನಂತೆ ೪ ಸೇರು ಸಕ್ಕರೆ ಕೊಂಡದ್ದು. |
| | ೧೫ ರೂ. ಇವತ್ತಿನ ಜಮೆ. | ೧– ೦–೦ | ಫಳಾರ ಕೊಂಡದ್ದು. |
| ೧೫–೧೦–೦ | ಅಂತು ಜಮೆ. | ೦–೧೦–೦ | ಕಾಯಿಪಲ್ಲೆಗೆ ಕೊಟ್ಟದ್ದು. |
| | | ೨– ೮–೦ | ಸಬಕಾರಕ್ಕೆ ಕೊಟ್ಟದ್ದು. |
| | | ೦– ೪–೦ | ಆಳಿನ ಕೂಲಿ ಕೊಟ್ಟದ್ದು. |
| | | | ೧೩-೮-೦ ಇವತ್ತಿನ ಖರ್ಚು |
| | | ೨– ೨–೦ | ರೋಖ ಶಿಲ್ಕು |
| | | ೧೫–೧೦–೦ | ಅಂತು ಖರ್ಚು |

ಶಂಕರನ ಇಂದಿನ ಡಾಯರಿ ಪರೀಕ್ಷಿಸಿ ನೋಡಿರಿ. ಪ್ರತಿಯೊಂದು ವ್ಯವಹಾರದ ವಿವರದ ಕೆಳಗೆ ಜೋಡು ಗೆರೆ ಹಾಕಿರುವನಲ್ಲವೇ ? ಯಾಕೆ ಹಾಕಿರಬಹುದು ? ಒಂದರ ವಿವರ ಮತ್ತೊಂದರಲ್ಲಿ ಕೂಡಬಾರದೆಂದು ಹೀಗೆ ಗೆರೆ ಹಾಕುವದು ಒಳ್ಳೆಯದು. ಮತ್ತು ಇವತ್ತಿನ ಜಮೆ, ಇವತ್ತಿನ ಖರ್ಚು ಗಳನ್ನು ಒಟ್ಟುಗೂಡಿಸಿ ವಿವರಣೆ ಮನೆಗಳಲ್ಲಿ ತೋರಿಸಿದ್ದಾನೆ. ಹಾಗೂ ಇಂದಿನ ಜಮೆ, ಹಿಂದಿನ ಶಿಲ್ಕು ಕೂಡಿಸಿ ಅಂತು ಜಮೆ ಮಾಡಿದ್ದಾನೆ. ಕೊನೆಗೆ ಉಳಿದ ಶಿಲ್ಕಿಗೆ ರೋಖ ಶಿಲ್ಕು ಎಂದಿದ್ದಾನೆ. ಇದಕ್ಕೆ ಕೆಲವರು ಮುಂದಿನ ಶಿಲ್ಕು ಅಥವಾ ಕೊನೆಯ ಶಿಲ್ಕು ಅಥವಾ ನಾಳಿನ ಶಿಲ್ಕು ಎಂದು ಬರೆಯುವರು.

ಒಟ್ಟಿನಮೇಲೆ : (೧) ಯಾವುದನ್ನಾದರೂ ಮಾರುವದು ಇಲ್ಲವೆ ಕೊಳ್ಳುವದು ಅಥವಾ ಯಾರಿಗಾದರೂ ಹಣ ಕೊಡುವದು ಇಲ್ಲವೆ ಯಾರಿಂದಾ ದರೂ ಹಣ ಬರುವದು ವ್ಯವಹಾರವೆನಿಸುವದು.

(೨) ವ್ಯವಹಾರಗಳಲ್ಲಿ ಜಮೆಯ ವ್ಯವಹಾರ, ಖರ್ಚಿನ ವ್ಯವಹಾರ ಎಂದು ೨ ತರಗಳುಂಟು.

(೩) ತನಗೆ ಯಾವದೇ ರೀತಿಯಿಂದ ಹಣ ಬಂದರೆ ಜಮೆ ಅನ್ನುವರು, ಅದೇ ತನ್ನಿಂದ ಹಣ ಹೋದರೆ ಖರ್ಚು ಅನ್ನುವರು.

(೪) ತನಗೆ ಬಂದ ಅಥವಾ ಹೋದ ಹಣದ ಬಗ್ಗೆ ಕಾರಣ ಸಹಿತ ಬರೆದಿಡುವದಕ್ಕೆ ಡಾಯರಿ ಅಥವಾ ಕಿರ್ದಿ ಅನ್ನುವರು.

(೫) ಡಾಯರಿ ಅಥವಾ ಕಿರ್ದಿ ಪಾನಿನಲ್ಲಿ ಸರಿಯಾಗಿ ಎರಡು ಭಾಗ ಮಾಡಿ ಎಡಗಡೆಯ ಅರ್ಧ ಭಾಗದಲ್ಲಿ ಜಮೆಯ ಹಣ ಮತ್ತು ಕಾರಣ ಬರೆ ಯುವರು. ಬಲಗಡೆಯ ಅರ್ಧದಲ್ಲಿ ಖರ್ಚಾದ ಹಣ ಮತ್ತು ಅದರ ಕಾರಣ ಬರೆಯುವರು.

(೬) ಒಟ್ಟು ಜಮೆಯ ರಕಮಿನಲ್ಲಿ ಹಿಂದಿನ ಶಿಲ್ಕು ಕೂಡಿಸಿ ಆದ ಒಟ್ಟಿನಲ್ಲಿ ಖರ್ಚಿನ ಒಟ್ಟು ಹಣ ಕಳೆದರೆ ಮುಂದಿನ ಶಿಲ್ಕು ಉಳಿಯುವದು. ಅದನ್ನು ಖರ್ಚಿನ ಕಡೆಗೆ ಬರೆದು ಆ ರಕಮಿನಲ್ಲಿ ಕೂಡಿಸುವರು. ಇದರಿಂದ ಒಟ್ಟು ಜಮೆ, ಒಟ್ಟು ಖರ್ಚು ಸರಿಯಾಗುವವು.

(೭) ಹೀಗೆ ದಿನಂಪ್ರತಿ ಲೆಕ್ಕ ಬರೆದಿಟ್ಟ ಪುಸ್ತಕಕ್ಕೆ ಜಮಾಖರ್ಚು ಅನ್ನುವರು.

## ಅಭ್ಯಸನಗಳು

(೧) ನಿಮ್ಮ ತಂದೆಯು ನಿಮ್ಮ ಕೈಯಲ್ಲಿ ೫ ರೂ. ಕೊಟ್ಟಿದ್ದನು. ನೀವು ಕೆಳಗಿನಂತೆ ಸಾಮಾನು ತಂದಿರಿ. ಅದರ ಡಾಯರಿ ಬರೆದು ತೋರಿಸಿರಿ. ಮತ್ತು ನಿಮ್ಮ ತಂದೆಗೆ ಎಷ್ಟು ಹಣ ತಿರುಗಿ ತಂದು ಕೊಡುವಿರಿ?

೭ ಆಣೆ ೬ ಪೈ ಕಾಯಿಪಲ್ಲೆ, ೫ ಆಣೆ ಟೆಂಗಿನಕಾಯಿ, ೧೨ ಆಣೆ ಫಳಾರ, ೧೦ ಆ. ಹಣ್ಣು, ೬ ಆ. ಎಲೆ, ೨ ರೂಪಾಯಿ ಅವಲಕ್ಕಿ.

(೨) ಮೊದಲಿನ ಶಿಲ್ಕು ೧ ರೂ. ೮ ಆ. ಇದ್ದವು. ತಾಯಿಯು ೫ ರೂ. ಕೊಟ್ಟಳು. ಮನೆಯಲ್ಲಿಯ ಖಾಲಿ ಬಾಟ್ಲಿ ೨ ರೂ. ಗೆ ಮಾರಿದಿರಿ. ಸೋಮಣ್ಣನ ಹತ್ತರ ೪ ರೂ. ಕೈಗಡ ತೆಗೆದುಕೊಂಡಿರಿ. ೨ ರೂ. ೪ ಆಣೆ ಗೋದಿ, ೧ ರೂ. ೧೨ ಆ. ಸಕ್ಕರೆ, ೪ ರೂ. ೮ ಆ. ಕಟ್ಟಿಗೆ ತಂದಿರಿ. ೩ ರೂ. ಹಾಲಿನವನಿಗೆ ಕೊಟ್ಟಿರಿ. ಇವುಗಳ ಡಾಯರಿ ಬರೆದು ಶಿಲ್ಕು ಎಷ್ಟು ಉಳಿಯಿತೆಂಬುದನ್ನು ಹೇಳಿರಿ.

(೩) ೨ ರೂ. ೧೦ ಆ. ನಿನ್ನಿನ ಶಿಲ್ಕು ಇತ್ತು. ೧೨ ರೂ. ಸ್ಕಾಲರಶಿಪ್ ಹಣ ಬಂದಿತು. ಮಾವನು ೧೦ ರೂ. ಕೊಟ್ಟನು. ೨ ರೂ. ೮ ಆ. ಟೊಪ್ಪಿಗೆ, ೮ ರೂ. ಕೋಟು, ೪ ರೂ. ೮ ಆ. ಚಪ್ಪಲು ಕೊಂಡಿರಿ. ೧೦ ಆ. ಸಿನೇಮಾಕ್ಕೆ ಕೊಟ್ಟಿರಿ. ೪ ಆಣೆ ಚಹ ಕುಡಿದಿರಿ. ಇವುಗಳ ಡಾಯರಿ ಬರೆದು ಶಿಲ್ಕು ಎಷ್ಟು ಉಳಿಯಿತೆಂಬದನ್ನು ಹೇಳಿರಿ.

(೪) ಒಮ್ಮೆ ಶಂಕರನ ಸಾಲೆಯಲ್ಲಿ ಗಣಪತಿಯ ಉತ್ಸವ ಮಾಡಬೇಕಾಯಿತು. ಅದಕ್ಕಾಗಿ ಒಬ್ಬೊಬ್ಬ ಹುಡುಗನಿಗೆ ೨ ಆಣೆಯಂತೆ ೭೫ ಹುಡುಗರು ಪಟ್ಟೀ ಹಾಕಿದರು. ಶಿಕ್ಷಕರು ೨ ರೂ. ಕೊಟ್ಟರು. ಆದೆಲ್ಲ ಹಣವನ್ನು ಶಂಕರನ ಕೈಯಲ್ಲಿ ಕೊಟ್ಟು ಬೇಕಾದ ಸಾಮಾನುಗಳನ್ನು ತರಬೇಕೆಂದೂ ಅದರ ಡಾಯರಿ ಬರೆದು ತೋರಿಸಬೇಕೆಂದೂ ಗುರುಗಳು ಹೇಳಿದರು. ಶಂಕರನು ಒಪ್ಪಿ ಮಂಟಪ ಶೃಂಗಾರಕ್ಕಾಗಿ ೨ ರೂ. ೪ ಆಣೆಗಳ ಕಾಗದ, ೮ ಆಣೆಗಳ ಹುರಿ, ೪ ಆಣೆಗಳ ಅಂಟು ತಂದನು. ಗಣಪತಿಗೆ ೨ ರೂ. ಕೊಟ್ಟನು. ೨ ರೂ. ಪೂಜಾ ಸಾಮಾನು, ೧ ರೂ. ೮ ಆ. ಪಟಾಕ್ಷಿ, ೧ ರೂ. ೪ ಆ. ತೂರಮರಿಗಳನ್ನು ತಂದನು. ಮತ್ತು ಕೆಳಗಿನಂತೆ ಗುರುಗಳಿಗೆ ಡಾಯರಿ ಬರೆದು ತೋರಿಸಿದನು.

ಶ್ರೀ

## ಶಂಕರ ಕುಲಕರ್ಣಿ ಡಾಯರಿ

ತಾರೀಖು : ೨೦-೧-೧೯೫೨

| ಜಮಾ ರೂ. | | ಖರ್ಚು ರೂ. | |
|---|---|---|---|
| ೯-೬-೦ | ಹುಡುಗರಿಂದ ಬಂದದ್ದು | ೨- ೪-೦ | ಮಂಟಪ ಶೃಂಗಾರಕ್ಕೆ ಕಾಗದ ತಂದದ್ದು. |
| ೨-೦-೦ | ಶಿಕ್ಷಕರಿಂದ ಬಂದದ್ದು. | ೦- ೮-೦ | ಹುರಿಗೆ ಕೊಟ್ಟದ್ದು |
| ೧೧-೬-೦ | ಅಂತು ಜಮೆ | ೦- ೪-೦ | ಅಂಟು ತಂದದ್ದು |
| ೧೧-೬-೦ | ಅಂತು ಜಮೆ. | ೨- ೦-೦ | ಗಣಪತಿಗೆ ಕೊಟ್ಟದ್ದು |
| | | ೨- ೦-೦ | ಪೂಜಾಸಾಮಾನುಗಳನ್ನು ತಂದದ್ದು |
| | | ೧- ೮-೦ | ಪಟಾಕ್ಷಿ ತಂದದ್ದು |
| | | ೧- ೪-೦ | ತೂರಮರಿ ತಂದದ್ದು |
| | | ೯-೧೨-೦ | ಇವತ್ತಿನ ಖರ್ಚು |
| | | ೧-೧೦-೦ | ರೋಖ ಶಿಲ್ಕು |
| | | ೧೧- ೬-೦ | ಅಂತು ಖರ್ಚು |

ಇದೇ ಮೇರೆಗೆ ಶಾಲೆಯ ಸ್ನೇಹಸಮ್ಮೇಲನ, ಪಾಲಕರ ದಿನ, ಮಕ್ಕಳ ಪ್ರವಾಸ ಮೊದಲಾದವುಗಳಲ್ಲಿ ಮಾಡಿದ ವ್ಯವಹಾರಗಳಲ್ಲಿ ಮಾಡಿದ ಜಮಾ ಖರ್ಚನ್ನೂ ಅವನು ಬರೆದು ತೋರಿಸಿದನು. ಇದನ್ನು ಕಂಡು ಗುರುಗಳು ಅವನನ್ನು ಶಾಲೆಯ ಸಹಕಾರಿ ಅಂಗಡಿಯ ಸೆಕ್ರೆಟರಿಯನ್ನಾಗಿ ಮಾಡಿದರು. ಅವನು ಬರೆದ ಸಹಕಾರೀ ಅಂಗಡಿಯ ಒಂದು ದಿವಸದ ಜಮಾ ಖರ್ಚು ಕೆಳಗೆ ತೋರಿಸಿದೆ.

**ವ್ಯವಹಾರ:—** ೧ ರೂ. ೮ ಆಣೆಗೆ ಒಂದು ಡಝನಿನಂತೆ ೩ ಡಝನ್ ಪೆನ್ಸಿಲ ಕೊಂಡಿತು. ೬ ಆಣೆಗೆ ಒಂದು ದಸ್ತಿನಂತೆ ೧೦ ದಸ್ತು ಕಾಗದ ಕೊಂಡಿತು. ೮ ಆಣೆಗೆ ಒಂದರಂತೆ ೨ ಪಾಟಿ ಮಾರಿತು. ಒಂದು ಆಣೆಗೆ ೩ ರಂತೆ ೧೫ ಮಸಿ ಚೀಟು ಮಾರಿತು. ೪ನೆಯ ವರ್ಗದ ವಿದ್ಯಾರ್ಥಿ ಈರನಿಂದ ೪ ಆಣೆ ಮೆಂಬರ ವರ್ಗಣಿ ಬಂದಿತು. ಶಿವರಾಯ ಸಾಲೆ ಬಿಟ್ಟದ್ದರಿಂದ ಅವನ ವರ್ಗಣಿ ಹಣ ೮ ಆಣೆ ಪರತ ಕೊಟ್ಟಿತು. ಮೊದಲು ಪೆಟ್ಟಿಗೆಯಲ್ಲಿ ೧೦ ರೂ. ಶಿಲ್ಕು ಇದ್ದವು.

## ವಿದ್ಯಾರ್ಥಿಗಳ ಸಹಕಾರಿ ಅಂಗಡಿ ಕಿರ್ದಿ

ತಾರೀಖು:— ೨೫—೧—೧೯೫೨

| ರೂ. | ಜಮಾ | ರೂ. | ಖರ್ಚು |
|---|---|---|---|
| ೧೦-೦-೦ | ನಿನ್ನಿನ ಶಿಲ್ಕು | ೪-೮-೦ | ಒಂದು ಡಝನ್ನಿಗೆ ೧ರೂ. ೮ ಆ. ಯಂತೆ ೩ ಡಝನ ಪೆನ್ಸಿಲ್ ಕೊಂಡದ್ದು |
| ೧-೦-೦ | ಪಾಟೀ ಮಾರಿ ಬಂದದ್ದು | ೩-೧೨-೦ | ೧ ದಸ್ತಿಗೆ ೬ ಆಣೆಯಂತೆ ೧೦ ದಸ್ತು ಕಾಗದ ಕೊಂಡದ್ದು |
| ೦-೫-೦ | ಮಸಿ ಚೀಟು ೧೫ ಮಾರಿದ್ದು | ೦-೮-೦ | ಶಿವರಾಯ ಸಾಲೆ ಬಿಟ್ಟದ್ದರಿಂದ ವರ್ಗಣಿ ಪರತ ಕೊಟ್ಟದ್ದು. |
| ೦-೪-೦ | ೪ನೇ ವರ್ಗದ ವಿದ್ಯಾರ್ಥಿ ಈರನಿಂದ ಬಂದದ್ದು | ೮-೧೨-೦ | ಇವತ್ತಿನ ಖರ್ಚು |
| ೧-೯-೦ | ಇವತ್ತಿನ ಜಮೆ | ೨-೧೩-೦ | ರೋಖ ಶಿಲ್ಕು |
| ೧೧-೯-೦ | ಅಂತು ಜಮೆ | ೧೧-೯-೦ | ಅಂತು ಖರ್ಚು |

ಶಂಕರನು ತನ್ನ ಮಾವನ ಅಂಗಡಿಗೆ ಹೋಗುತ್ತಿದ್ದನು. ಅಲ್ಲಿ ಮಾವನು ಗಿರಾಕಿಗಳಿಗೆ ಮಾಡಿಕೊಡುತ್ತಿದ್ದ ಬೆಲೆ ಪಟ್ಟಿಗಳನ್ನು ನೋಡುತ್ತಿದ್ದ. ಒಂದು ದಿನ ಒಂದು ಗಿರಾಕಿಗೆ ಬೆಲೆಪಟ್ಟಿಯನ್ನು ಶಂಕರನೇ ಬರೆದು ಕೊಟ್ಟನು. ಆತನು ಬರೆದ ಬೆಲೆ ಪಟ್ಟಿಯು ಕೆಳಗಿನಂತಿದೆ.

## ಬಾಬು ಬಸವಂತಪ್ಪ ಪಾಟೀಲ ಕಿರಾಣಿ ವ್ಯಾಪಾರಿ, ಧಾರವಾಡ

ರಾ| ರಾ| ರಾಮರಾವ ದೇಸಾಯಿ ಮಾಳಮರಡಿ, ಧಾರವಾಡ ಇವರಿಗೆ

ಮಾಲು ಕೊಟ್ಟ ವಿವರ— ತಾ:— ೧೬—೬—೫೨

| ಅ. ನಂ | ಮಾಲಿನ ಹೆಸರು | ತೂಕ, ಅಳತೆ, ಇಲ್ಲವೆ ಸಂಖ್ಯೆ | ದರ | ಒಟ್ಟು ಬೆಲೆ | ಶರಾ |
|---|---|---|---|---|---|
| ೧ | ಕೊಲ್ಲಾಪುರ ಬೆಲ್ಲ | ೧\|\|\| ಮಣ | ಮಣಕ್ಕೆ ೭ ರೂ. | ೧೨- ೪-೦ | |
| ೨ | ಪುಠಾಣಿ | ೨ ಸೇರು | ೧ ಸೇರಿಗೆ ೧-೪-೦ | ೨- ೮-೦ | |
| ೩ | ಕುಸಿಬಿ ಎಣ್ಣಿ | ೭ ಸೇರು | ೧ ಸೇರಿಗೆ ೦-೬-೦ | ೨-೧೦-೦ | |
| ೪ | ಮಸಾಲೆ | ೨ ಸೇರು | ೧ ಸೇರಿಗೆ ೦-೧೨-೦ | ೧- ೮-೦ | |
| ೫ | ಅವಲಕ್ಕಿ | ೧ ಧಡೆ | ೧ ಧಡೆಗೆ ೩-೮-೦ | ೩- ೮-೦ | |
| ೬ | ಎಲೆಕಟ್ಟು | ೧ ಕಟ್ಟು (೧೦೦ ಎಲೆ) | ೧ ಕಟ್ಟಿಗೆ ೨-೪-೦ | ೨- ೪-೦ | |
| | | | | ೨೪-೧೦-೦ | |

ಲೆಕ್ಕದಲ್ಲಿ ತಪ್ಪಿದ್ದರೆ ಕೊಡಬೇಕು ಹಾಗು ತಕ್ಕೊಳ್ಳಬೇಕು.

ಸಹಿ.................................

ಅಂಗಡಿ ಮಾಲಕ

ಶಂಕರನು ಬರೆದ ಮೇಲಿನ ಬೆಲಿಪಟ್ಟಿಯನ್ನು ನೋಡಿರಿ. ಅದನ್ನು ತಯಾರಿಸುವ ವಿಷಯದಲ್ಲಿ ಕೆಳಗಿನ ಸಂಗತಿಗಳನ್ನು ಲಕ್ಷ್ಯದಲ್ಲಿಡಿರಿ.

(೧) ಅಂಗಡಿಯ ಮಾಲಕನ ಹೆಸರು ಮತ್ತು ಅಂಗಡಿ ಹೆಸರು ಬರೆಯಬೇಕು.

(೨) ಮಾಲು ಕೊಂಡ ಗಿರಾಕಿಯ ಹೆಸರು ಬರೆಯಬೇಕು.

(೩) ತಾರೀಖು, ತಿಂಗಳು ಇಸ್ವಿ ಬರೆಯಬೇಕು.

(೪) ಕಾಗದದಲ್ಲಿ ಆರು ಮನೆಗಳನ್ನು ಮಾಡಿ ಮೊದಲನೆಯದರಲ್ಲಿ ನಂಬರು, ೨ನೆಯದರಲ್ಲಿ ಮಾಲಿನ ಹೆಸರು, ೩ನೆಯದರಲ್ಲಿ ತೂಕ, ಅಳತೆ ಇಲ್ಲವೆ ಸಂಖ್ಯೆ, ೪ನೆಯದರಲ್ಲಿ ದರ, ೫ನೆಯದರಲ್ಲಿ ಒಟ್ಟು ಬೆಲೆ, ೬ನೆಯದ ರಲ್ಲಿ ಶರಾ ಬರೆಯಬೇಕು. ಆ ಮೇಲೆ ಕೊಟ್ಟ ಮಾಲನ್ನು ಕ್ರಮವಾಗಿ ಅದರ ವಿವರದೊಂದಿಗೆ ಆಯಾ ಕೋಷ್ಟಕಗಳಲ್ಲಿ ಬರೆಯಬೇಕು. ಮತ್ತು ಕೊಟ್ಟ ಮಾಲಿನ ಒಟ್ಟು ಬೆಲೆಯನ್ನು ಬೇರೀಜು ಮಾಡಿ ಬರೆಯಬೇಕು.

# ಉತ್ತರಗಳು

ಪು. ೧

(೧) ನಾಲ್ವತ್ತೈದು ಸಾವಿರದಾ ಆರುನೂರಾ ಎಪ್ಪತ್ತೆಂಟು; ಮೂವತ್ತು ಸಾವಿರದಾ ಎರಡುನೂರಾ ಅರುವತ್ತೆಂಟು; ಅರುವತ್ತೇಳು ಸಾವಿರದಾ ಇಪ್ಪತ್ತು ಮೂರು; ಇಪ್ಪತ್ತು ಸಾವಿರದಾ ಎಂಬತ್ತಾರು; ಮೂವತ್ತೆರಡು ಸಾವಿರದಾ ಆರು ನೂರಾ ಐದು. (೨) (ಅ) ೪೬೫೩೭ (ಆ) ೬೮೦೫೭ (ಇ) ೩೦೦೦೪ (ಈ) ೭೨೦೦೮ (ಉ) ೨೮೫೦೬.

## ಉದಾಹರಣೆಗಳು (೧) ಪು. ೪

(೧) ನಾಲ್ಕುಲಕ್ಷ ಮೂವತ್ತೈದು ಸಾವಿರದಾ ಆರುನೂರಾ ಇಪ್ಪತ್ತೆಂಟು. (೨) ಎಂಟುಲಕ್ಷ ಐವತ್ತುಸಾವಿರದಾ ಮೂರುನೂರಾ ನಾಲ್ವತ್ತೈದು. (೩) ಒಂಬತ್ತುಲಕ್ಷ ಎಂಟುಸಾವಿರದಾ ಏಳುನೂರಾ ನಾಲ್ವತ್ತಾರು. (೪) ಎರಡು ಲಕ್ಷ ಮೂರುನೂರಾ ಎಂಬತ್ತುನಾಲ್ಕು (೫) ೮೨೪೬೧೮ (೬) ೫೧೬೦೪೮ (೭) ೪೫೬೮೦೪. (೮) ೭೪೮೦೦೬. (೯) ೯೯೯೯, ೯೯೯೯೯, ೯೯೯೯೯೯. (೧೦) ೧೦೦೦೦, ೧೦೦೦೦೦. (೧೧) ೧೦೦ ಸಾವಿರ, ೧೦೦೦ ನೂರುಗಳು. ೪೦೦೦ ನೂರುಗಳು. (೧೨) ೭೦೦೦೦, ೬೦೦೦೦, ೮೦೦೦೦೦.

## ಉದಾಹರಣೆಗಳು (೨) ಪು. ೭-೮

(೧) ಏಳುಕೋಟಿ ಇಪ್ಪತ್ತುಮೂರುಲಕ್ಷ ನಾಲ್ವತ್ತೆಂಟು ಸಾವಿರದಾ ಆರು ನೂರಾ ಐವತ್ತುನಾಲ್ಕು. (೨) ಆರುಕೋಟಿ ನಾಲ್ವತ್ತೆರಡುಲಕ್ಷ ಆರುಸಾವಿರದಾ ಎಪ್ಪತ್ತೆಂಟು. (೩) ಐದುಕೋಟಿ ಆರುಲಕ್ಷ ಏಳುಸಾವಿರದಾ ಎಂಬತ್ತು. (೪) ನಾಲ್ಕುಕೋಟಿ ಇಪ್ಪತ್ತೆಂಟುಸಾವಿರದಾ ಮೂರುನೂರಾ ಒಂಬತ್ತು. (೫) ೬೭೨೩೬೪೦೫. (೬) ೩೦೦೮೩೮೨೮. (೭) ೨೦೩೦೪೫೦೬. (೮) ೯೮೮೦೦೬೨೪. (೯) ೩೦೦೦೦೦; ೪೫೦೦೦; ೬೩೦೦೦೦೦೦. (೧೦) ೬೦೦೦೦೦೦; ೧೨೦೦೦೦೦೦; ೨೫೦೦೦೦೦. (೧೧) ೫೦೦೦೦; ೭೫೦ ದ. ಸಾ. (೧೨) ೨೫೦ ಲಕ್ಷ; ಕಾಲು ಕೋಟಿ.

## ಉದಾಹರಣೆಗಳು (೩) ಪು. ೮-೯

(೧) ೯೮೦೬೮೩೭೮. (೨) ೭೬೧೯೧೨೩೩. (೩) ೩೮೮೭೮೮೦೯. (೪) ೧೧೧೭೪೦೮೧. (೫) ೨೨೨೧೧೩೦೮೮. (೬) ೩೩೦೯೨೮೩೦೨೬. (೭) ೨೧೬೯೫೬೭; ೪೮ ಶೇಷ. (೮) ೩೪೯೧೭; ೧೩೪ ಶೇಷ.

### ಉದಾಹರಣೆಗಳು (೪) ಪು. ೧೧

*(೬) ೨೬೩ ರೂ. ೧೦ ಆ. ೮ ಪೈ. (೭) ೫೮ ಮ. ೧ ಧ. ೪ ಸೇರು. (೮) ೫೬ ರೂ. ೧೦ ಆ. ೩ ಪೈ. (೯) ೨೪ ತಾ. ೨ ಮಿ. ೪೦ ಸೇ. (೧೦) ೨೨ ಪೌಂ. ೫ ಶಿ. ೦ ಪೇ. (೧೧) ೬೨ ತಾ. ೧೦ ಮಿ. ೩೦ ಸೇ. (೧೨) ೮೮ ಟ. ೧೦ ಹ. ೧ ಕ್ವಾ. ೧೬ ಪೌಂ.

### ಉದಾಹರಣೆಗಳು (೫) ಪು. ೧೨

(೫) ೫ ಮ. ೧ ಧ. ೪ ಸೇ. (೬) ೮ ವೈ. ೨ ಫ. ೧೨ ಯಾರ್ಡು. (೭) ೧ ಮ. ೧ ಧ. ೪ ಸೇ. (೮) ೧ ರೂ. ೧೨ ಆ. ೪ ಪೈ. (೯) ೮ ರೂ. ೩ ಆ. ೬ ಪೈ. (೧೦) ೧ ರೂ. ೪ ಆ. ೯ ಪೈ.

### ಮಿಶ್ರ ಉದಾಹರಣೆಗಳು (೬) ಪು. ೧೨-೧೩

(೧) ೭೮ ರೂ. ೧೫ ಆ. ೮ ಪೈ. (೨) ೯೯ ರೂ. ೦ ಆ. ೦ ಪೈ. (೩) ೩೬ ರೂ. ೦ ಆ. ೪ ಪೈ. (೪) ೧೬ ರೂ. ೧೩ ಆ. ೬ ಪೈ. (೫) ೧೩೦ ತೊ. ೪ ಮಾ.

### ಉದಾಹರಣೆಗಳು (೭) ಪು. ೧೪

(೬) ೩೬; ೧೮; ೧೬; ೧೨; (೭) ೭; ೨೬; ೧೫; ೮. (೮) ೩೮ ಹುಡುಗರು.

### ಉದಾಹರಣೆಗಳು (೮) ಪು. ೧೫

(೧) ೧, ೨, ೩, ೫, ೭, ೧೧, ೧೩, ೧೭, ೧೯. (೨) ೨೦, ೨೧, ೨೨, ೨೪, ೨೫, ೨೬, ೨೭, ೨೮, ೩೦, ೩೨, ೩೩, ೩೪, ೩೫, ೩೬, ೩೮, ೩೯, ೪೦. (೩) ೩, ೯, ೧೫, ೨೧, ೨೭. (೪) ೮೩, ೮೯, ೯೭.

### ಉದಾಹರಣೆಗಳು (೯) ಪು. ೧೬

(೧) ೩ × ೨ × ೨; ೨ × ೨ × ೨ × ೨; ೩ × ೩ × ೨. (೨) ೨ × ೨ × ೫; ೩ × ೨ × ೨ × ೨; ೩ × ೩ × ೩. (೩) ೫ × ೩ × ೨; ೫ × ೭; ೨ × ೨ × ೩ × ೩. (೪) ೫ × ೨ × ೨ × ೨; ೫ × ೩ × ೩; ೨ × ೨ × ೨ × ೨ × ೩. (೫) ೫ × ೫ × ೨; ೭ × ೨ × ೨ × ೨; ೩ × ೫ × ೨ × ೨. (೬) ೩೭ × ೨; ೩ × ೩ × ೨ × ೨ × ೨; ೫ × ೨ × ೨ × ೨ × ೨. (೭) ೭ × ೩ × ೨ × ೨; ೩ × ೩ × ೫ × ೨; ೨ × ೨ × ೨ × ೨ × ೨ × ೩. (೮) ೫ × ೫ × ೨ × ೨; ೭ × ೫ × ೩; ೩ × ೩ × ೩ × ೨ × ೨. (೯) ೭ × ೨ × ೨ × ೨ × ೨; ೫ × ೩ × ೨ × ೨ × ೨; ೫ × ೫ × ೫. (೧೦) ೨ × ೨ × ೨ × ೨ × ೨ × ೨ × ೨; ೨ × ೨ × ೨ × ೨ × ೩ × ೩; ೨ × ೨ × ೨ × ೨ × ೨ × ೫.

---

*ಟೀಪು:— ಉದಾಹರಣೆಗಳಲ್ಲಿಯ ಬಾಯಿಲೆಕ್ಕಗಳ ಉತ್ತರವನ್ನು ಕೊಟ್ಟಿಲ್ಲ.

## ಉದಾಹರಣೆಗಳು (೧೦) ಪುಟ ೧೯–೨೦

(೧) ೧೬; ೩೨; ೨೭; ೧೫. (೧) ೨೪, ೪೨; ೨೪, ೫೬, ೬೪, ೧೨೪; ೨೪. (೩) ೫. (೪) ೨. (೫) ಎಲ್ಲ ಸಂಖ್ಯೆಗಳಿಗೂ ೯ ರಿಂದ ಮತ್ತು ೪ ರಿಂದ ಭಾಗ ಹೋಗುತ್ತದೆ. ಆದ್ದರಿಂದ ೯ ಮತ್ತು ೪ ಈ ಅಂಕಿಗಳು ಆ ಸಂಖ್ಯೆಗಳ ಅವಯುವಗಳಾದವು. ಆದ್ದರಿಂದ ೩೬ (೯ × ೪) ರಿಂದ ಭಾಗ ಹೋಗುತ್ತದೆ. (೬) ಭಾಗ ಹೋಗುತ್ತದೆ. (೭) ೫ × ೩ × ೨ × ೨ × ೨; ೭ × ೩ × ೨ × ೨ × ೨; ೩ × ೩ × ೩ × ೨ × ೨ × ೨. (೮) ೭ × ೩ × ೨ × ೨; ೭ × ೫ × ೩; ೫ × ೩ × ೩ × ೩. (೯) ೩ × ೨ × ೨ × ೨ × ೨ × ೨; ೫ × ೨ × ೨ × ೨ × ೨ × ೨; ೭ × ೨ × ೨ × ೨ × ೨; (೧೦) ೭ × ೩ × ೩ × ೨ × ೨; ೨ × ೨ × ೨ × ೨ × ೨ × ೨ × ೨ × ೨; ೩×೩×೩×೩×೨×೨. (೧೧) ೫ × ೫ × ೩ × ೩; ೭ × ೭ × ೨ × ೨; ೩ × ೨ × ೨ × ೨ × ೨ × ೨ × ೨. (೧೨) ೫ × ೩ × ೩ × ೨ × ೨; ೩ × ೭ × ೨ × ೫; ೫ × ೩ × ೨ × ೨ × ೨ × ೨.

## ಉದಾಹರಣೆಗಳು (೧೧) ಪು. ೨೦

(೪) ೨, ೩, ೪, ೬, ೮, ೧೨, ೧೬, ೩೨, ೪೮; ೨, ೩, ೪, ೬, ೯, ೧೨, ೧೮, ೨೭, ೩೬, ೫೪; ೨, ೩, ೪, ೫, ೬, ೮, ೧೦, ೧೨, ೧೫, ೨೦, ೨೪, ೩೦, ೪೦, ೬೦. (೫) ೩, ೫, ೯, ೧೫, ೨೭, ೪೫; ೨, ೩, ೪, ೬, ೮, ೯, ೧೨; ೧೬, ೧೮, ೨೪, ೩೬, ೪೮, ೭೨; ೨, ೪, ೭, ೮, ೧೪, ೧೬, ೨೮, ೫೬.

## ಉದಾಹರಣೆಗಳು (೧೨) ಪು. ೨೨

(೬) ೨, ೩, ೪, ೬, ೧೨. (೭) ೨, ೩, ೬, ೧೨. (೮) ೨, ೩, ೪, ೬, ೯, ೧೨, ೩೬. (೯) ೩, ೫, ೧೫. (೧೦) ೨, ೩, ೬, ೧೨. (೧೧) ೫, ೨೫. (೧೨) ೨, ೩, ೪, ೬, ೮, ೧೨, ೨೪.

## ಉದಾಹರಣೆಗಳು (೧೩) ಪು. ೨೪

(೧) ೬. (೨) ೮. (೩) ೩. (೪) ೭. (೫) ೧೫. (೬) ೧೨. (೭) ೧೨. (೮) ೩೬. (೯) ೧೫. (೧೦) ೧೨. (೧೧) ೨೫. (೧೨) ೨೪. (೨) ೩೫ ಹುಡುಗರು. (೩) ೧೧ ಸೇ. (೪) ೧೨ ಪೂ.

## ಉದಾಹರಣೆಗಳು (೧೪) ಪು. ೨೫

(೧) ೪, ೮, ೧೨, ೧೬, ೨೦, ೨೪, ೨೮, ೩೨, ೩೬, ೪೦. (೨) ೫, ೧೦, ೧೫, ೨೦, ೨೫, ೩೦, ೩೫, ೪೦. (೩) ೬, ೧೨, ೧೮; ೭, ೧೪, ೨೧; ೮, ೧೬, ೨೪; ೯, ೧೮, ೨೭. (೪) ೧೨, ೨೪, ೩೬, ೪೮.

## ಉದಾಹರಣೆಗಳು (೧೫) ಪು. ೨೮

(೧) ೩೬. (೨) ೬೦. (೩) ೧೨೬. (೪) ೨೧೬. (೫) ೧೨೦. (೬) ೧೭೫. (೭) ೩೬೦. (೮) ೧೦೮. (೯) ೧೬೦. (೧೦) ೧೬೮. (೧೧) ೧೪೪೦. (೧೨) ೨೮೮. (೧೩) ೯೪೫. (೧೪) ೧೦೫೦. (೧೫) ೫೧೪೮. (೧೬) ೧೮೫೨೫. (೧೭) ೩೧೫. (೧೮) ೬೦೦೬. (೧೯) ೭೨ ಕೊಡ. (೨೦) ೬೦ ಮೈಲುಗಳು. (೨೧) ೬ ಆಣೆ. (೨೨) ೩೬೭ ಹಣ್ಣುಗಳು. (೨೩) ೨೯೬ ಹೂಗಳು. (೨೪) ೧೮೫.

## ಉದಾಹರಣೆಗಳು (೧೬) ಪು. ೩೨–೩೩

(೧೧) $\frac{೫}{೧೩}$ ಭಾಗ. (೧೨) ಏಳು ಹನ್ನೊಂದನೆಯ.ಅಂಶ; ಆರು ಹದಿನೈದನೆಯಂಶ; ಮೂರು ಇಪ್ಪತ್ತನೆಯಂಶ; ಐದು ಒಂಬತ್ತನೆಯಂಶ. (೧೩) $\frac{೩}{೮}$ ಒಂದು ವಸ್ತುವಿನಲ್ಲಿಯ ಸರಿಯಾದ ೮ ಭಾಗಗಳಲ್ಲಿಯ ೩ ಭಾಗಗಳು; $\frac{೫}{೧೩}$ ಒಂದು ವಸ್ತುವಿನಲ್ಲಿಯ ೧೩ ಸರಿಯಾದ ಭಾಗಗಳಲ್ಲಿಯ ೫ ಭಾಗಗಳು. $\frac{೧೧}{೧೮}$ ಒಂದು ವಸ್ತುವಿನಲ್ಲಿಯ ಸರಿಯಾದ ೧೮ ಭಾಗಗಳಲ್ಲಿಯ ೧೧ ಭಾಗಗಳು; $\frac{೭}{೯}$, ೯ ಭಾಗಗಳಲ್ಲಿಯ ೭ ಭಾಗಗಳು. (೧೪) ೮ ಆ.; ೪ ಆ.; ೨ ಆಣೆ ಮತ್ತು ೫ ಆಣೆಗಳು. (ಅ) ೧೯ ಮಿನಿಟುಗಳು. (ಬ) ೭ ಫರ್ಲಾಂಗುಗಳು. (ಕ) ೧೨ ದಿವಸಗಳು. (ಡ) ೧೫ ಹಾಳೆಗಳು. (ಇ) ೧೫ ಇಂಚುಗಳು. (ಫ) ೩ ದಿವಸಗಳು. (ಗ) ೭ ಶಿಲಿಂಗುಗಳು. (ಹ) ೧೧ ಮಾಸಿಗಳು. (೧೫) ೧ ರೂ. ಯಲ್ಲಿ ಮಾಡಿದ ಭಾಗಗಳನ್ನೆಲ್ಲಾ ತಕ್ಕೊಂಡದ್ದರಿಂದ ಇವೆಲ್ಲವುಗಳು ಬೆಲೆಯಲ್ಲಿ ಸರಿ ಇವೆ. ಅವುಗಳ ಬೆಲೆ ೧ ರೂ. (೧೬) $\frac{೩}{೭}$, $\frac{೫}{೭}$, $\frac{೬}{೭}$, $\frac{೮}{೭}$; $\frac{೨}{೩}$, $\frac{೧}{೩}$, $\frac{೫}{೩}$, $\frac{೩}{೪}$, $\frac{೧}{೪}$. (೧೭) $\frac{೩}{೬}$ ಹೊ. ಜೋಳ; $\frac{೧}{೬}$ ಹೊ. ಸಜ್ಜೆ; $\frac{೨}{೬}$ ಹೊ. ಕಡಲೆ. (೧೮) $\frac{೧}{೪}$; $\frac{೫}{೮}$; $\frac{೪}{೬}$; $\frac{೫}{೯}$; $\frac{೨}{೫}$; $\frac{೫}{೮}$; $\frac{೪}{೬}$; $\frac{೬}{೮}$. (೧೯) $\frac{೩}{೪}$; $\frac{೩}{೮}$; $\frac{೨}{೬}$; $\frac{೪}{೯}$; $\frac{೩}{೫}$; $\frac{೩}{೮}$; $\frac{೨}{೬}$; $\frac{೨}{೮}$.

## ಉದಾಹರಣೆಗಳು (೧೭) ಪು. ೩೬–೩೬

(೬) $\frac{೯}{೧೬}$ ಹ. (೭) $\frac{೧೫}{೩೦}$ ತಾ. (೮) $\frac{೧೦}{೧೬}$ ರೂ. (೯) $\frac{೧೮}{೩೫}$ ಭಾ. (೧೦) $\frac{೧೩}{೧೬}$ ಭಾ. (೧೧) $\frac{೪೨}{೪೮}$ ಮ.

## ಉದಾಹರಣೆಗಳು (೧೮) ಪು. ೪೦–೪೧

(೧೧) $\frac{೪}{೧೬}$ ರೂ. (೧೨) $\frac{೬}{೩೦}$ ಭಾ. (೧೩) $\frac{೩}{೧೬}$ ಪೌಂ. (೧೪) $\frac{೭}{೧೩}$ ಫೂ. ಉದ್ದ; $\frac{೭}{೧೩}$ ಫೂ. ಅಗಲ. (೧೫) $\frac{೪}{೧೬}$ ರೂ. (೧೬) $\frac{೩}{೧೩}$ ವಾರ. (೧೭) $\frac{೩}{೧೬}$ ರೂ. (೧೮) $\frac{೩}{೮}$ ಭಾ. (೧೯) $\frac{೨}{೬}$ ಭಾ.

## ಉದಾಹರಣೆಗಳು (೨೦) ಪು. ೪೪

(೧೧) ೩$\frac{೮}{೧೬}$ ರೂ. (೧೨) ೮$\frac{೬}{೭}$ ಪೈ. (೧೩) ಪೂರ್ಣಾಂಕಿಗಳು. ೬, ೭, ೧೨; ಅಪೂರ್ಣಾಂಕಿಗಳು $\frac{೫}{೭}$, $\frac{೧}{೨}$, $\frac{೧೦}{೧೩}$. (೧೪) $\frac{೨}{೧}$; $\frac{೪}{೧}$; $\frac{೬}{೧}$; $\frac{೭}{೧}$; $\frac{೯}{೧}$.

## ಉದಾಹರಣೆಗಳು (೨೧) ಪು. ೪೭-೪೮

(೧೧) ೩$\frac{೨}{೮}$; ೨$\frac{೨}{೯}$; ೨$\frac{೪}{೧೧}$. (೧೨) ೨$\frac{೨}{೪}$; ೬$\frac{೪}{೫}$; ೮$\frac{೪}{೮}$; ೨$\frac{೧}{೪}$. (೧೩) ೭$\frac{೧೧}{೧೬}$ ರೂ., ೧೧$\frac{೨}{೧೨}$ ತೊ. ೭$\frac{೮}{೨೦}$ ಪೌಂ. ೩$\frac{೩}{೧೬}$ ಯಾ. (೧೪) $\frac{೨೦೫}{೧೬}$ ರೂ. $\frac{೧೧೯}{೧೨}$ ಫೂ. $\frac{೧೬೧}{೧೨}$ ವರ್ಷ; $\frac{೧೯೪}{೨}$ ದಿ.

## ಉದಾಹರಣೆಗಳು (೨೩) ಪು. ೫೪

(೧೩) $\frac{೨೧}{೩೦} = \frac{೩೫}{೫೦}$. (೧೪) $\frac{೨೭}{೧೫} = \frac{೪೫}{೨೫}$. (೧೫) $\frac{೬}{೨೪}$; $\frac{೨೧}{೨೪}$; $\frac{೧೬}{೨೪}$; $\frac{೧೪}{೨೪}$. (೧೬) ೧$\frac{೨೫}{೧೨೦}$; $\frac{೪೮}{೧೨೦}$; $\frac{೨೧೦}{೧೨೦}$; $\frac{೬೪}{೧೨೦}$.

## ಉದಾಹರಣೆಗಳು (೨೪) ಪುಟ ೫೭--೫೮

(೬) $\frac{೨}{೫}$. (೭) $\frac{೨}{೫}$. (೮) $\frac{೧}{೩}$. (೯) $\frac{೨}{೫}$. (೧೦) $\frac{೨}{೩}$. (೧೧) $\frac{೫೬}{೬೪} = \frac{೨೮}{೩೨} = \frac{೧೪}{೧೬}$. (೧೨) $\frac{೬೦}{೧೪೪} = \frac{೧೫}{೩೬} = \frac{೧೦}{೨೪}$. (೧೩) $\frac{೪೨}{೧೪೭} = \frac{೭೦}{೨೪೫} = \frac{೩೦}{೧೦೫}$. (೧೪) $\frac{೯೬}{೧೪೪}$. (೧೫) $\frac{೭}{೫}$; $\frac{೧೫}{೧೬}$.

## ಉದಾಹರಣೆಗಳು (೨೫) ಪು. ೬೩

(೬) $\frac{೬}{೧೮}$, $\frac{೨}{೧೮}$, $\frac{೪}{೧೮}$. (೭) $\frac{೨}{೫}$ ಅತಿ ದೊಡ್ಡದು ಮತ್ತು $\frac{೮}{೧೫}$ ಅತಿ ಸಣ್ಣದು. (೮) $\frac{೨}{೪}$; $\frac{೨}{೯}$; $\frac{೪}{೫}$. (೯) $\frac{೧೧}{೨೪}$; $\frac{೭}{೧೮}$; $\frac{೮}{೨೧}$. (೧೦) ರಂಗನ ಮನೆಯಲ್ಲಿ ಹೆಚ್ಚು ಸಕ್ಕರೆ ಖರ್ಚಾಗುತ್ತದೆ. (೧೧) ರಾಮನು ತೀವ್ರವಾಗಿ ಓದಬಲ್ಲನು. (೧೨) ಸೋಮನು ಹೆಚ್ಚು ವೇಗವಾಗಿ ಓಡಿಸಬಲ್ಲನು. (೧೩) $\frac{೯}{೧೬}$, $\frac{೧೨}{೧೬}$, $\frac{೨೦}{೨೭}$. (೧೪) $\frac{೧೨}{೧೯}$, $\frac{೧೬}{೨೭}$, $\frac{೮}{೧೫}$. (೧೫) $\frac{೧೨}{೧೫}$ವು ದೊಡ್ಡದು.

## ಉದಾಹರಣೆಗಳು (೨೬) ಪು. ೬೬

(೭) ೧$\frac{೧}{೧೦}$ (೮) ೨$\frac{೫}{೮}$ (೯) ೧$\frac{೧೭}{೧೮}$ (೧೦) ೨$\frac{೪೧}{೯೦}$ (೧೧) ೨$\frac{೨}{೧೪}$ (೧೨) ೧$\frac{೨೫೭}{೪೨೦}$.

## ಉದಾಹರಣೆಗಳು (೨೭) ಪು. ೬೮–೬೯

(೧) ೬$\frac{೧}{೨}$ ರೂ. (೨) ೭$\frac{೫}{೬}$ ರೂ. (೩) ೪$\frac{೨}{೨೦}$ ಪೌಂ. (೪) ೧೦$\frac{೨}{೨೪}$ ಫೂ. (೫) ೧೦$\frac{೫}{೧೨}$ ದಿ. (೬) ೧೨$\frac{೭}{೧೨}$ ಫೂ. (೭) ೨$\frac{೧೭}{೨೪}$ ಮಣ. (೮) ೧೦$\frac{೯}{೩೨}$ ರೂ. (೯) ೧೦$\frac{೫}{೨೪}$. (೧೦) ೮$\frac{೧}{೯}$. (೧೧) ೩$\frac{೨}{೩೨}$ ರೂ. (೧೨) ೪೭$\frac{೧೨}{೩೨}$ ಮ. (೧೩) ೧೧$\frac{೧}{೨}$ ಫೂ. (೧೪) ೨೮$\frac{೨}{೮}$ ಸೇರು. (೧೫) ೧೮$\frac{೨}{೧೬}$ ರೂ. (೧೬) ೨೪೫$\frac{೫}{೨೪}$ ತೊಲಿ.

## ಉದಾಹರಣೆಗಳು (೨೯) ಪು. ೭೧

(೧) $\frac{೧}{೭}$ ಫೂ. (೨) $\frac{೧}{೭}$ ರೂ. (೩) ೧$\frac{೨}{೫}$ ಪೌಂ. (೪) ೧$\frac{೫}{೮}$. (೫) ೧$\frac{೨೧}{೮೦}$. (೬) $\frac{೧೩}{೫೪}$. (೭) ೧$\frac{೩}{೭}$. (೮) ೮$\frac{೧}{೪}$ ದಿಂದ ಹೆಚ್ಚಿದೆ. (೯) ೮$\frac{೫}{೪}$ ಸೇ. (೧೦) ೮$\frac{೭}{೯}$ ಯಾ. (೧೧) ೮$\frac{೩}{೧೦}$ ವ್ಯೆ. (೧೨) $\frac{೧೧}{೮೪}$ ಮಣ.

## ಉದಾಹರಣೆಗಳು (೩೦) ಪು. ೭೩–೭೪

(೬) ೧$\frac{೧}{೮}$. (೭) ೫$\frac{೧}{೪}$. (೮) ೩೧$\frac{೪}{೭}$ ರೂ. (೯) ೨$\frac{೧೧}{೧೮}$ ಮಣ. (೧೦) ೪$\frac{೧೩}{೭೪}$ ತೊ. (೧೧) ೯೬$\frac{೭}{೮}$ ರೂ. (೧೨) ೩$\frac{೧}{೧೮}$ ವಾ. (೧೩) $\frac{೩೧}{೮೮}$ ರೂ. (೧೪) ೩$\frac{೧೫}{೧೭}$ ರೂ. (೧೫) ೧$\frac{೩}{೮}$ ಫೂ. (೧೬) ಮೋಟಾರದಿಂದ ಹೆಚ್ಚು ಬೇಗನೆ ಹೋಗಬಹುದು. ಮತ್ತು ೧$\frac{೧೩}{೭೦}$ ತಾಸು ಉಳಿತಾಯವಾಗುವದು. (೧೭) ೭$\frac{೧೯}{೭೮}$. (೧೮) ೧$\frac{೭}{೧೦}$ ಸೇ. (೧೯) ೨$\frac{೧೩}{೭೦}$ ವ್ಯೆ. (೨೦) ೨$\frac{೫}{೮೪}$ ಫೂ.

## ಉದಾಹರಣೆಗಳು (೩೧) ಪು. ೭೭–೭೮

**ಗುಂಪು ೧.** (೧) ೧$\frac{೭}{೧೮}$. (೨) $\frac{೩೩}{೮೪}$. (೩) ೨$\frac{೧೯}{೮೪}$. (೪) ೨$\frac{೧೬}{೮೧}$. (೫) ೪$\frac{೩೭}{೭೦}$. (೬) ೩$\frac{೭}{೧೮}$. (೭) $\frac{೯}{೪೦}$. (೮) ೧$\frac{೩೭}{೪೦}$. (೯) $\frac{೭}{೮}$. (೧೦) ೧$\frac{೭}{೮}$. (೧೧) ೬$\frac{೯}{೪೦}$. (೧೨) $\frac{೧}{೨}$.

**ಗುಂಪು ೨.** (೧೧) ೧$\frac{೭}{೧೮}$. (೧೨) ೫$\frac{೪೭}{೮೧೦}$. (೧೩) ೮$\frac{೧}{೪}$. (೧೪) ೪$\frac{೧೧}{೮೪}$. (೧೫) ೨$\frac{೧೩}{೭೦}$. (೧೬) ೨$\frac{೧೧೩}{೧೮೦}$. (೧೭) ೨$\frac{೧೧}{೧೮}$. (೧೮) ೨$\frac{೭}{೧೦}$. (೧೯) ೪$\frac{೩}{೪}$. (೨೦) ೩$\frac{೫}{೧೮}$.

**ಗುಂಪು ೩.** (೧) ೧$\frac{೫}{೧೮}$ ರೂಪಾಯಿ. (೨) ೩$\frac{೨೩}{೧೮೦}$ ಎಕರೆ. (೩) ೩$\frac{೮}{೧೫}$ ವಾ. (೪) ೧೯$\frac{೭೩}{೯೬}$ ರೂ. (೫) ೭$\frac{೩}{೩೮}$ ರೂ. (೬) ೨$\frac{೧}{೧೮}$ ರೂ. (೭) ೩$\frac{೩}{೪}$ ಫೂಟು. (೮) $\frac{೨೯}{೬೦}$. (೯) ೩$\frac{೧}{೧೦}$ ರೂ. (೧೦) $\frac{೪}{೧೫}$.

## ಉದಾಹರಣೆಗಳು (೩೨) ಪು. ೮೩–೮೪

(೯) ೧೫೨ ತಾ. (೧೦) ೧೦೩$\frac{೨}{೮}$ ಶಿ. (೧೧) ೧೮$\frac{೩}{೮}$ ರೂ. (೧೨) ೨೮$\frac{೨}{೮}$ ರೂ. (೧೩) ೧೩$\frac{೧}{೮}$ ರೂ. (೧೪) (ಅ) ೭$\frac{೧}{೮}$ ರೂ. (ಆ) ೧೩$\frac{೩}{೮}$ ಫೂ. (ಇ) ೨$\frac{೨}{೮}$ ತಿಂ. (ಈ) ೩$\frac{೩}{೪}$. (ಉ) ೫$\frac{೧}{೮}$; (ಊ) ೨೦. (೧೫) ಮಗನಿಗೆ ೭೫೦೦ ರೂ. ಮಗಳಿಗೆ ೩೭೫೦ ರೂ. ಹೆಂಡತಿಗೆ ೨೫೦೦ ರೂ. ವಾಚನಾಲಯಕ್ಕೆ ೧೨೫೦ ರೂ. (೧೬) ೨೪೦ ಗಿಡಗಳು.

## ಉದಾಹರಣೆಗಳು (೩೩) ಪು. ೮೭–೮೮

(೬) ೫/೮; ೧೦; ೨/೩ (= ೨ ೧/೩) (೭) ೪/೫; ೧೦ ೩/೫. (೮) ೩ ೨/೪; ೮ ೨/೩; ೩ ೨/೩. (೯) ೫ ೨/೩ ವೈ. (೧೦) ೬ ರೂ. (೧೧) ೧೨೦ ೨/೩ ರೂ. (೧೨) ೧/೩ ಭಾಗ. (೧೩) ೪೨ ೧೩/೧೬ ರೂ. (೧೪) ೧೮೦ ರೂ. (೧೫) ೧೪ ಮಗನ ವಯಸ್ಸು.

## ಉದಾಹರಣೆಗಳು (೩೪) ಪು. ೯೦–೯೧

(೪) ೪ ೨/೦; ೨/೧; ೫/೪; ೨/೩. (೫) ೧ ೨/೪ ರೂ. (೬) ೧ ೯/೧೬ ರೂ. (೭) ೨/೮ ಸೇ. (೮) ೧ ೨/೪ ರೂ. (೯) ೨/೫ ಸೇ. (೧೦) ೧ ೨/೪ ಆ. (೧೧) ೩ ೧/೪ ವೈ. (೧೨) ೨ ೫/೧೬ ರೂ. (೧೩) ೧೦/೧೬. (೧೪) ೫/೩೨. (೧೫) ೧/೫.

## ಉದಾಹರಣೆಗಳು (೩೫) ಪು. ೯೩

(೫) ೫; ೭ ೨/೩; ೧೦ ೨/೩ (೬) ೪೮ ಡಬ್ಬಿಗಳು (೭) ೧/೨ ತಾ. (೮) ೧೦ ತುಂಡು. (೯) ೧೬ ದಿ. (೧೦) ೯ ೧/೭ ವಾರ. (೧೧) ೪ ೪/೫. (೧೨) ೧೨ ೨/೩ ತುಂಡು. (೧೩) ೨೦ ಪು. (೧೪) ೪ ೨/೩ ದಿ. (೧೫) ೧೭ ೧/೩; ೩೭ ೧/೩.

## ಉದಾಹರಣೆಗಳು (೩೬) ಪು. ೯೭–೯೮

(೬) ೧ ೨/೧೪; ೧/೭; ೨/೮. (೭) ೬; ೨/೩; ೨ ೧/೩. (೮) ೨/೩; ೧ ೧/೫; ೨. (೯) ೨/೩; ೧೪; ೨ ೨/೩. (೧೦) ೧ ೧/೪; ೧ ೨/೩; ೩ ೨/೪. (೧೧) ೧/೩ ಸೇ. (೧೨) ೨ ೨/೪ ಡಝನ. (೧೩) ೮ ೭/೧೬ ರೂ. (೧೪) ೨/೫. (೧೫) ೩ ೨/೪ ತೊ. (೧೬) ೨ ೧/೩ ವ. (೧೭) ೨/೧೦ ಸೇ. (೧೮) ೫ ೧/೩ ಅಂತರ.

## ಉದಾಹರಣೆಗಳು (೩೭) ಪು. ೯೯

(೧) ೧/೬; ೧/೩. (೨) ೧/೩೦; ೨. (೩) ೧/೩೫; ೧೭ ೧/೩. (೪) ೧; ೪ ೨/೧೬. (೫) ೧/೩೪. (೬) ೧೨ ೭/೮. (೭) ೪/೧೫. (೮) ೫/೩೪. (೯) ೫/೪. (೧೦) ೪೬. (೧೧) ೨/೪. (೧೨) ೩ ೨/೧೫. (೧೩) ೨ ೭/೯. (೧೪) ೧/೪.

## ಉದಾಹರಣೆಗಳು (೩೮) ಪು. ೧೦೧

(೧) ೯, ೧೨, ೧೪, ೧೩ ೧/೨, ೩೬ ಆಣೆಗಳು. (೨) ೧೦ ೨/೩; ೫; ೬ ೧/೩; ೧೫ ೨/೪ ಮಾಸಿಗಳು; ೮೪, ೪೦, ೫೨, ೧೨೬ ಗುಂಜಿಗಳು. (೩) ೧೮, ೧೫, ೨೦, ೫೬, ೧೩೨ ತಾಸುಗಳು. (೪) ೨೪; ೨೨ ೨/೩; ೪ ೨/೩; ೧೨೦; ೯೦ ಇಂಚುಗಳು.

(೫) ೭$\frac{೧}{೫}$; ೬$\frac{೨}{೩}$; ೧೬$\frac{೪}{೫}$; ೪೨; ೯೦ ತಿಂಗಳುಗಳು. (೬) ೩೨, ೨೪, ೩೬, ೪೦, ೬೮ ಸೇರುಗಳು. (೭) ೧೪ ಪೈ. (೮) ೪೩ ಲಿಂಬಿಹಣ್ಣುಗಳು. (೯) ೫$\frac{೧}{೨}$ ಸೇ. (೧೦) ೧೦೮ ಕೊಡಗಳು. (೧೧) ೪೪ ತುಂಡುಗಳು. (೧೨) ೩೩. (೧೩) ೨೯೫. (೧೪) ೫$\frac{೧}{೨}$ ಮೈ. ೨೯೦೦೨ ಫೂಟಿಗಿಂತ ಹೆಚ್ಚು. ಆದ್ದರಿಂದ ವಿಮಾನಗಳು ಶಿಖರವನ್ನು ಮುಟ್ಟಬಲ್ಲವು. (೧೫) ೫೬$\frac{೨}{೩}$ ಪುಟಗಳಲ್ಲಿ ಕತೆ ಬರೆದರೂ ಆದರ ಪುಟಗಳು ೫೭.

## ಉದಾಹರಣೆಗಳು (೩೯) ಪು. ೧೦೩

(೧) $\frac{೧}{೬}$, $\frac{೧}{೪}$, $\frac{೧}{೩}$, $\frac{೧}{೨}$, $\frac{೨}{೩}$, $\frac{೫}{೬}$ ಆ. ಗಳು. (೨) $\frac{೧}{೮}$; $\frac{೩}{೧೬}$; $\frac{೧}{೪}$; $\frac{೫}{೧೬}$; $\frac{೩}{೮}$; $\frac{೭}{೧೬}$; $\frac{೧}{೨}$; $\frac{೯}{೧೬}$; $\frac{೫}{೮}$; $\frac{೧೧}{೧೬}$; $\frac{೩}{೪}$; $\frac{೧೩}{೧೬}$; $\frac{೭}{೮}$; $\frac{೧೫}{೧೬}$ ರೂ. ಗಳು. (೩) $\frac{೧}{೧೨}$; $\frac{೧}{೬}$; $\frac{೧}{೪}$; $\frac{೧}{೩}$; $\frac{೫}{೧೨}$; $\frac{೧}{೨}$; $\frac{೭}{೧೨}$; $\frac{೨}{೩}$; $\frac{೩}{೪}$; $\frac{೫}{೬}$; $\frac{೧೧}{೧೨}$ ತೊಲಿಗಳು. (೪) $\frac{೧}{೪}$; $\frac{೩}{೮}$; $\frac{೧}{೨}$; $\frac{೫}{೮}$; $\frac{೩}{೪}$ ಮಾಸಿಗಳು. (೫) $\frac{೧}{೧೨}$; $\frac{೧}{೧೦}$; $\frac{೧}{೬}$; $\frac{೧}{೫}$; $\frac{೧}{೪}$; $\frac{೨}{೫}$; $\frac{೧}{೨}$; $\frac{೩}{೫}$; $\frac{೨}{೩}$; $\frac{೩}{೪}$ ತಾಸುಗಳು. (೬) $\frac{೧}{೬}$; $\frac{೧}{೪}$; $\frac{೧}{೩}$, $\frac{೧}{೨}$; $\frac{೨}{೩}$; $\frac{೩}{೪}$ ಫೂಟುಗಳು. $\frac{೧}{೧೮}$; $\frac{೧}{೧೨}$; $\frac{೧}{೯}$; $\frac{೧}{೬}$; $\frac{೨}{೯}$; $\frac{೧}{೪}$ ಯಾರ್ಡುಗಳು. (೭) $\frac{೧}{೧೫}$; $\frac{೧}{೧೦}$; $\frac{೧}{೬}$; $\frac{೧}{೫}$; $\frac{೨}{೫}$; $\frac{೧}{೨}$; $\frac{೪}{೫}$ ತಿಂಗಳುಗಳು. (೮) $\frac{೧}{೨೪}$; $\frac{೧}{೧೬}$; $\frac{೧}{೧೨}$; $\frac{೧}{೮}$; $\frac{೧}{೬}$; $\frac{೧}{೪}$; $\frac{೧}{೨}$; $\frac{೫}{೮}$; $\frac{೩}{೪}$; $\frac{೭}{೮}$ ಮಣಗಳು. (೯) $\frac{೧}{೮}$; $\frac{೧}{೪}$; $\frac{೩}{೮}$; $\frac{೧}{೨}$; $\frac{೩}{೪}$ ಮೈಲುಗಳು. (೧೦) $\frac{೧}{೪}$; $\frac{೧}{೩}$; $\frac{೧}{೨}$; $\frac{೨}{೩}$; $\frac{೩}{೪}$; $\frac{೫}{೬}$ ದಸ್ತುಗಳು. (೧೧) ೨$\frac{೧}{೪}$ ರೂ. (೧೨) ೪$\frac{೨}{೩}$ ರೂ. (೧೩) ೬$\frac{೨}{೩}$ ತಾ. (೧೪) ೫$\frac{೧}{೧೬}$ ರೂ. (೧೫) ೨$\frac{೪}{೫}$ ತಿಂಗಳು ಮತ್ತು ೨೩$\frac{೫}{೮}$ ರೂ. ಬೆಲೆ.

## ಉದಾಹರಣೆಗಳು (೪೦) ಪು. ೧೦೮

(೧೧) ೧೫೩೦ ರೂ. (೧೨) ೧೭$\frac{೧}{೨}$ ರೂ. (೧೩) ೨೫೨ ರೂ. (೧೪) ೧$\frac{೧}{೪}$ ರೂ. (೧೫) ೫ ರೂ. ೧೧ ಆ. (೧೬) ೪ ಪುಟ (೧೭) ೧೬$\frac{೧}{೨}$ ಆ. (೧೮) ೨ ರೂ. ೪ ಆ. (೧೯) ೧ ರೂ. ೧೦$\frac{೧}{೪}$ ಆ. (೨೦) ೧೦೫ ಮೈ.

## ಉದಾಹರಣೆಗಳು (೪೧) ಪು. ೧೦೯

(೧) $\frac{೧}{೬}$ ಪ. (೨) $\frac{೧}{೧೦}$ ಪ. (೩) $\frac{೧}{೩೦}$ ಭಾ. (೪) $\frac{೧}{೨೪}$ ಭಾಗ. (೫) $\frac{೧}{೨೪}$ ಭಾ. (೬) ೨$\frac{೧}{೪}$ ಸೇ. (೭) ೩$\frac{೩}{೪}$ ರೂ. (೮) ೪$\frac{೧}{೨}$ ರೂ. (೯) ೧$\frac{೧}{೨}$ ಆ. (೧೦) $\frac{೩}{೮}$ ರೂ. ಅಂದರೆ ೬ ಆ. (೧೧) ೯ ಮಿ. = $\frac{೩}{೨೦}$ ತಾಸು. (೧೨) ೨$\frac{೧}{೨}$ ಕೊಡ. (೧೩) ೧$\frac{೧}{೨}$ ಬಿಲ್ಲಿ. (೧೪) $\frac{೩}{೪}$ ರೂ. (=೧೨ ಆಣೆ) (೧೫) ೧ ರೂ. ೨ ಆ. (೧೬) ೧ ಆ. (೧೭) ೭೫ ಪು. (೧೮) ೧$\frac{೧}{೨}$ ಎ. (೧೯) ೧$\frac{೧}{೪}$ ತಿ. (೨೦) ೨$\frac{೧}{೨}$ ರೂ.

## ಉದಾಹರಣೆಗಳು (೪೨) ಪು. ೧೧೧-೧೧೨

(೧) ೪೦ ಲಿಂಬೀಹಣ್ಣು. (೨) ೧೬೦ ಎಲಿಗಳು. (೩) ೧ $\frac{೭}{೮}$ ರೂ. (೪) $\frac{೩}{೮}$ ತಾ. (೫) ೧೨೬ ರೂ. (೬) ೩೬ ಪು. (೭) ೮ ರೂ. ೧೨ ಆ. (೮) ೩ ರೂ. ೧೨ $\frac{೨}{೫}$ ಆ. (೯) ೧೧ $\frac{೪}{೫}$ ಆ. (೧೦) ೪೧ $\frac{೪}{೫}$ ರೂ.

## ಉದಾಹರಣೆಗಳು (೪೩) ಪುಟ ೧೧೬

(೧) $\frac{೯}{೧೧}$ ತಾ. (೨) ೩೪ ರೂ. ೬ ಆ. (೩) ೧೦ $\frac{೩}{೮}$ ರೂ. (೪) ೧೩ ರೂ. ೨ ಆ.

## ಉದಾಹರಣೆಗಳು (೪೪) ಪು. ೧೧೮-೧೧೯

(೧೧) ೯೬ ಗಡ್ಡಿ. (೧೨) ೧೮ ರೂ. ೬ ಆ. (೧೩) ೩೩ ರೂ. ೧೨ ಆ. (೧೪) ೬ ರೂ. ೯ ಆ. (೧೫) ೧೨ ರೂ. ೬ ಆ. (೧೬) ೬೦ ರೂ. ೯ ಆ. (೧೭) ೨೬೪ ರೂ. (೧೮) ೧ ಸೇರು. (೧೯) ೧೫೩೬ ರೂ. (೨೦) ೮೪ ರೂ. ೬ ಆ.

## ಉದಾಹರಣೆಗಳು (೪೫) ಪು. ೧೨೪-೧೨೫

(೯) ೧೨ ದಿ. (೧೦) ೧೦ ಜನರು. (೧೧) ೧೨ ಸಾರಿ. (೧೨) ೪೮ ದಿವಸಗಳ ವರೆಗೆ. (೧೩) ೧೨ ದಿನ ಹೆಚ್ಚು. (೧೪) ೫ ಜನರನ್ನು ಹೆಚ್ಚಿಗೆ ತಕ್ಕೊಳ್ಳಬೇಕು. (೧೫) ೨ ತಿಂ. ೨೪ ದಿ. (೧೬) ೯ ದಿ. (೧೭) ೫೦ ದಿ. (೧೮) ಒಟ್ಟು ೪೪ ದಿ.; ೪ ದಿ. ಹೆಚ್ಚು. (೧೯) $\frac{೩}{೭}$ ತಾ. ತಡ. (೨೦) ೧೮ ದಿವಸ.

## ಉದಾಹರಣೆಗಳು (೪೬) ಪು. ೧೨೭

(೧) ೧೮೦೦೦ ರೂ. (೨) ತಿನ್ನತಕ್ಕ ಭಾಗ ೬ ಫೂ., ಇಡೀ ಕಬ್ಬಿನ ಉದ್ದಳತೆ ೧೦ $\frac{೩}{೮}$ ಫೂ. (೩) ಒಕ್ಕಲಿಗರು ೭೫೦; ಒಟ್ಟು ಜನಸಂಖ್ಯೆ ೧೫೦೦. (೪) ೧೮ ಎಕರೆ.

## ಉದಾಹರಣೆಗಳು (೪೭) ಪು. ೧೨೮

(೧) ೭೦ ರೂ. ಗಳ ಮೇವು. (೨) ೪೨ $\frac{೨}{೫}$ ಮೊಳ. (೩) ೩೦ ದಿವಸ. (೪) ೪೫೦ ಕೊಡ.

## ಉದಾಹರಣೆಗಳು (೪೮) ಪು. ೧೩೦

(೧) ೬ ಜ. ಹೆಚ್ಚಿಗೆ ಬಂದವರು. (೨) ೨ ಜನರು. (೩) ೨೫ ಮೈ. (೪) ೪ ಆ. (೫) ೩ ಜನರು.

## ಉದಾಹರಣೆಗಳು (೫೦) ಪು. ೧೩೩

(೬) ೧೦೦ ರೂ. ಬ. (೭) ೪೫ ರೂ. ಬ. (೮) ೭೦ ರೂ. ಬ. (೯) ೮೫ ರೂ. ಬ. (೧೦) ೯ ರೂ. ಬ. (೧೧) ೧೪ ರೂ. ಬ. (೧೨) ೧೨ ೧/೪ ರೂ. ಬ. (೧೩) ೧೦ ೧/೩ ರೂ. (೧೪) ೨೨ ೧/೩ ರೂ. (೧೫) ೫೭೬ ರೂ. ರಾ. (೧೬) ೪೭೯ ೧/೩ ೧/೫ ರೂ. ರಾ. (೧೭) ೭೪೧ ರೂ. ರಾ. (೧೮) ೮೨೫ ರೂ. ರಾ. (೧೯) ೧೩೯೪ ರೂ. ರಾ. (೨೦) ೬೦೭ ೧/೩ ರೂ. ರಾ.

## ಉದಾಹರಣೆಗಳು (೫೧) ಪು. ೧೩೭

(೧) ೨೮೮ ರೂ. ಬ. (೨) ೨೧,೪೪ ರೂ. (೩) ೧೬೨ ರೂ. (೪) ೨೨೫ ರೂ. ಬ. (೫) ೧೦೦೮ ರೂ. (೬) ೧೩೮ ರೂ. (೭) ೯೫ ರೂ. ೧೦ ಆ.

## ಉದಾಹರಣೆಗಳು (೫೪) ಪುಟ ೧೩೯—೧೪೦

(೬) ೧೫ ಆ. ಹಾನಿ. (೭) ೧೦ ಆ. ಲಾಭ. (೮) ೫ ರೂ. ಲಾಭ. (೯) ೮ ಆ. ಗಳಿಗೆ ೧ ಸೇ. ನಂತೆ. (೧೦) ೨ ೧/೩ ಆ.

## ಉದಾಹರಣೆಗಳು (೫೫) ಪು. ೧೪೧

(೧) ೧೫೦ ರೂ. ಕರ, ೪೬೫೦ ರೂ. ಉಳಿದ ಉತ್ಪನ್ನ (೨) ೩೩೦ ರೂ. ತಿಂಗಳ ಪಗಾರ. (೩) ೪೦೦೦ ಜನರು. (೪) ೨೦೦ ರೂ. (೫) ೪೦೦ ರೂ.

## ಉದಾಹರಣೆಗಳು (೫೬) ಪು. ೧೪೨

(೧) ೨ ರೂ. ೧೩ ಆ. (೨) ೪೫೦೦ ರೂ. (೩) ೨೦೦ ಪು. ಗಳು. (೪) ೧ ರೂ. ೪ ಆಣೆ.




ಮುದ್ರಕರು: ಶ್ರೀ ಎಸ್. ಜಿ. ಪಾಲೇಕರ, ವಸಂತ ಮುದ್ರಣಾಲಯ, ಧಾರವಾಡ

ಅಳತೆ ಮುಂತಾದವುಗಳ ಮಾಹಿತಿಯನ್ನು ಕೊಟ್ಟಿದೆ. ಚೆಕ್ಕು, ಹುಂಡಿ, ಪ್ರೋನೋಟಿನ ವ್ಯವಹಾರಗಳನ್ನು ವಿವರಿಸಿ, ಬೀಜಗಣಿತದ ಪ್ರಾರಂಭಿಕ ಪಾಠಗಳನ್ನು ಉದಾಹರಣೆಗಳೊಂದಿಗೆ ವಿವೇಚಿಸಿದೆ. ವಿದ್ಯಾರ್ಥಿಗಳ ಬುದ್ಧಿಶಕ್ತಿಯನ್ನು ಕುದುರಿಸುವ ಉದ್ದೇಶದಿಂದ ಅಲ್ಲಲ್ಲಿ ಕೆಲವು ಬಿಡಿಯಾದ ಲೆಕ್ಕಗಳನ್ನು ಕೊಟ್ಟಿದೆ.

ಎಲ್ಲ ಪುಸ್ತಕಗಳಲ್ಲಿಯೂ ವಿಷಯವು ಸುಲಭಗ್ರಾಹ್ಯವಾಗುವಂತೆ ಆಕೃತಿ, ಅಂಕಿ-ಸಂಖ್ಯೆಗಳನ್ನೂ ಕೊಟ್ಟಿದೆ. ಸಾಕಷ್ಟು ಬಾಯಿಲೆಕ್ಕಗಳನ್ನೂ ಅಭ್ಯಾಸಕ್ಕಾಗಿ ಉದಾಹರಣೆಗಳನ್ನೂ ಕೊಟ್ಟಿದೆ. ಹಾಗೂ ಅವು ವೈವಿಧ್ಯಪೂರ್ಣವೂ ನಿತ್ಯ ಜೀವನಕ್ಕೆ ಸಂಬಂಧಿಸಿದವೂ ಆಗಿರುವಂತೆ ಗಮನಿಸಲಾಗಿದೆ.

ಈ ಪುಸ್ತಕವನ್ನು ತಮ್ಮ ಕಾರ್ಯಬಾಹುಳ್ಯದಲ್ಲಿಯೂ ಬಿಡುವು ಮಾಡಿಕೊಂಡು ಬರೆದುಕೊಟ್ಟ ತಜ್ಞರಿಗೂ, ಇದನ್ನು ಓದಿ, ಮುನ್ನುಡಿಯನ್ನು ಬರೆದುಕೊಟ್ಟ ಕರ್ನಾಟಕ ಕಾಲೇಜಿನ ನಿವೃತ್ತ ಗಣಿತ ಪ್ರಾಧ್ಯಾಪಕರಾದ ಶ್ರೀ. ಬಿ. ಬಿ. ಬಾಗಿ, ಎಂ. ಎ., ಹಾಗೂ ಅಭಿಪ್ರಾಯವನ್ನು ಬರೆದು ಕೊಟ್ಟ ಮುಂಬಯಿ ಮೇಲ್ಮನೆಯ ಸದಸ್ಯರಾದ ಶ್ರೀ ಎಚ್. ಎಫ್. ಕಟ್ಟಿಮನಿ, ಬಿ. ಎ. ಇವರ ಅನಂತ ಉಪಕಾರಗಳನ್ನು ಸ್ಮರಿಸುತ್ತೇವೆ. ಮತ್ತು ರಚನೆಯಲ್ಲಿ ಅವಶ್ಯವಾದ ಸಲಹೆಯನ್ನು ಕೊಟ್ಟು ನೆರವು ನೀಡಿದ ಹಾಗು ಹಸ್ತಪ್ರತಿಗಳನ್ನು ಸಿದ್ಧಪಡಿಸಿ ಕೊಟ್ಟ ಅನುಭವಿಕ ಶಿಕ್ಷಕರಾದ ಶ್ರೀ ಜಿ. ಚ. ಹಿರೇಮಠ, ಶ್ರೀ ಹಾವಳಿ, ಶ್ರೀ ಕೆ. ಎಸ್. ಪಾಟೀಲ ಹೆ. ಮಾ. ಪ್ರಾ. ಸ್ಕೂಲ ಇವರಿಗೂ, ಅಂದವಾದ ಆಕೃತಿಗಳನ್ನು ಬರೆದು ಕೊಟ್ಟ ಶ್ರೀ ಮೂರ್ತಿ ಹಾಗೂ ಶ್ರೀ ಜೀವೋತ್ತಮ ಮಂಗಳೂರ ಅವರಿಗೂ, ಸಕಾಲಕ್ಕೆ ಮುದ್ರಣ ಮಾಡಿಕೊಟ್ಟ ವಸಂತ ಮುದ್ರಣಾಲಯದ ಒಡೆಯರಾದ ಶ್ರೀ ಎಂ. ಜಿ. ಪಾಲೇಕರ ಅವರಿಗೂ ಆಭಾರಿಯಾಗಿದ್ದೇವೆ.

ಈ ಪುಸ್ತಕದಲ್ಲಿರಬಹುದಾದ ಲೋಪದೋಷಗಳನ್ನು ತಜ್ಞರು ತಿಳಿಸಿದರೆ, ಪುನರ್ಮುದ್ರಣದಲ್ಲಿ ಕೃತಜ್ಞತೆಯಿಂದ ತಿದ್ದಿಕೊಳ್ಳುವೆವು. ಅವಸರದಲ್ಲಿ ಉಳಿದಿರಬಹುದಾದ ಮುದ್ರಣ ದೋಷಗಳನ್ನು ಮುಂದಿನ ಅಚ್ಚಿನಲ್ಲಿ ಸರಿಪಡಿಸಿಕೊಳ್ಳಲಾಗುವದು.

—ಪ್ರಕಾಶಕರು.

# ಕನ್ನಡ ಸಾಹಿತ್ಯ ಪ್ರಕಾಶನದಿಂದ ಪ್ರಸಿದ್ಧವಾದ ಪುಸ್ತಕಗಳು.



| | | | | |
|---|---|---|---|---|
| ೧. | ನಮ್ಮ ಭಾರತದ ಇತಿಹಾಸ | ಭಾಗ ೧. | ೫ನೆಯ ಇಯತ್ತೆಗೆ | ೦-೧೪-೦ |
| ೨. | ,, | ಭಾಗ ೨. | ೬ನೆಯ ಇಯತ್ತೆಗೆ | ೧- ೪-೦ |
| ೩. | ,, | ಭಾಗ ೩. | ೭ನೆಯ ಇಯತ್ತೆಗೆ | ೧- ೬-೦ |
| ೪. | ಗಣಿತ ಬೋಧೆ | | ೪ನೆಯ ಇಯತ್ತೆಗೆ | ೧- ೦-೦ |
| ೫. | ,, | ಭಾಗ ೧. | ೫ನೆಯ ,, | ೧- ೬-೦ |
| ೬. | ,, | ಭಾಗ ೨. | ೬ನೆಯ ,, | ೧-೧೨-೦ |
| ೭. | ,, | ಭಾಗ ೩. | ೭ನೆಯ ,, | ೨- ೪-೦ |
| ೮. | ನೂತನ ಸಾಮಾನ್ಯ ಜ್ಞಾನ | | ೪ನೆಯ ,, | ೦-೧೦-೦ |

Printed by: Shri M. G. Palekar, Vasant Printing Works, Dharwar.
Published by: Shri B. C. Hiremath, Manager, Kannada Sahitya Prakashana, Dharwar.